# ಜ್ಯೋತಿ ಹೊಸೂರ

# ಸಾಹಿತ್ಯದ ವಿಭಿನ್ನ ನೆಲೆಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ
ಸಂಪ್ರಬಂಧ)


ಸಂಶೋಧಕ

ಸತ್ಯಪ್ಪ. ಬಸಪ್ಪ. ಪಂಗಣ್ಣವರ

ಮಾರ್ಗದರ್ಶಕರು

ಡಾ. ಅಶೋಕ ನರೋಡೆ

ಕನ್ನಡ ವಿಭಾಗ

ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ,

ಹಾರೂಗೇರಿ. ತಾ:ರಾಯಬಾಗ





ಸಂಯೋಜನೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾರಣ್ಯ – ೫೮೩೨೭೬

೨೦೦೮



432

432

# ಜ್ಯೋತಿ ಹೊಸೂರ
# ಸಾಹಿತ್ಯದ ವಿಭಿನ್ನ ನೆಲೆಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕ
ಸತ್ಯಪ್ಪ. ಬಸಪ್ಪ. ಪಂಗಣ್ಣವರ



ಮಾರ್ಗದರ್ಶಕರು
ಡಾ. ಅಶೋಕ ನರೋಡೆ

ಕನ್ನಡ ವಿಶ್ವವಿದ್ಯಾಲಯ. ಹಂಪಿ.

ಕನ್ನಡ ವಿಭಾಗ
ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ,
ಹಾರೂಗೇರಿ. ತಾ:ರಾಯಬಾಗ




ಸಂಯೋಜನೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ – ೫೮೩೨೭೬

೨೦೦೮

## ದೃಢೀಕರಣ ಪತ್ರ

ಸತ್ಯಪ್ಪ ಬಸಪ್ಪ ಪಂಗಣ್ಣವರ ಇವರು **"ಜ್ಯೋತಿ ಹೊಸೂರ ಸಾಹಿತ್ಯದ ವಿಭಿನ್ನ ನೆಲೆಗಳು"**. ಎಂಬ ಶಿರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದಾರೆ. ಹಾರೂಗೇರಿ ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಳಿಗಾಗಿ ಸಲ್ಲಿಸಿಲ್ಲ. ಇದು ಈ ಮೊದಲು ಇಡಿಯಾಗಿಯಾಗಲಿ, ಅಥವಾ ಬಿಡಿ-ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ.
ದಿನಾಂಕ: 08/10/2008

ಡಾ. ಅಶೋಕ ನರೋಡೆ
ಮಾರ್ಗದರ್ಶಕರು
ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ,
ಹಾರೂಗೇರಿ, ಬೆಳಗಾವಿ.
(ಸಂಯೋಜಿತ ಕನ್ನಡ ವಿಶ್ವವಿದ್ಯಾಲಯ ಹಂಪಿ)

## ದೃಢೀಕರಣ ಪತ್ರ

ಸತ್ಯಪ್ಪ ಬಸಪ್ಪ ಪಂಗಣ್ಣವರ ಇವರು **"ಜ್ಯೋತಿ ಹೊಸೂರ ಸಾಹಿತ್ಯದ ವಿಭಿನ್ನ ನೆಲೆಗಳು"**. ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿ ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಳಿಗಾಗಿ ಸಲ್ಲಿಸಿಲ್ಲ. ಇದು ಈ ಮೊದಲು ಇಡಿಯಾಗಿಯಾಗಲಿ, ಅಥವಾ ಬಿಡಿ-ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ.
ದಿನಾಂಕ: 08/10/2008

ಡಾ. ಅಶೋಕ ನರೋಡೆ
ಮಾರ್ಗದರ್ಶಕರು
ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ,
ಹಾರೂಗೇರಿ, ಬೆಳಗಾವಿ.
(ಸಂಯೋಜಿತ ಕನ್ನಡ ವಿಶ್ವವಿದ್ಯಾಲಯ ಹಂಪಿ)

# ಪ್ರಮಾಣ ಪತ್ರ

**"ಜ್ಯೋತಿ ಹೊಸೂರ ಸಾಹಿತ್ಯದ ವಿಭಿನ್ನ ನೆಲೆಗಳು"** ಎಂಬ ಸಂಪ್ರಬಂಧವನ್ನು ಹಾರೂಗೇರಿಯ, ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿರುವೆ. ಪ್ರಸ್ತುತ ಸಂಪ್ರಬಂಧವು ಡಾ. ಅಶೋಕ ನರೋಡೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಈ ಮೊದಲು ಯಾವುದೇ ಪದವಿಗಳಿಗಾಗಿ ಸಲ್ಲಿಸಿಲ್ಲ. ಇದನ್ನು ಬಿಡಿ-ಬಿಡಿಯಾಗಿ ಇಲ್ಲವೆ ಇಡಿಯಾಗಿ ಆಗಲಿ ಎಲ್ಲಿಯೂ ಪ್ರಕಟಿಸಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸುತ್ತೇನೆ.

ಸ್ಥಳ : ಹಾರೂಗೇರಿ.
ದಿನಾಂಕ: 08/10/2008

(ಸತ್ಯಪ್ಪ ಬಿ. ಪಂಗಣ್ಣವರ)
ಸಂಶೋಧನಾ ವಿದ್ಯಾರ್ಥಿ
ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ
ಹಾರೂಗೇರಿ.

# ಕೃತಜ್ಞತೆಗಳು


ಸಾಹಿತ್ಯ ಸಂಶೋಧನೆಯು ಹೃದಯಂಗಮ್ಯವೂ ಮತ್ತು ಆಹ್ಲಾದವನ್ನು ನೀಡುವಂಥದ್ದು. ತಾತ್ವಿಕ ವಿಚಾರಶೀಲ, ಚಿಂತನೆಯ ಮೂಲಕ ಭಿನ್ನ, ವಿಭಿನ್ನ ಸಾಹಿತ್ಯದ ಆಯಾಮಗಳನ್ನು ಅರಿತುಕೊಳ್ಳುವುದೆ ಸಂಶೋಧನೆಯಾಗಿದ್ದು ಇದರಲ್ಲಿರುವ ಸೂಕ್ಷ್ಮವಿಚಾರಗಳನ್ನು ತಿಳಿಯಲು, ಶೋಧಿಸುವ ಪ್ರಯತ್ನ ಮಾಡಬೇಕೆಂದು ತಿಳಿದು ಒಬ್ಬ ಒಳ್ಳೆಯ ಸಾಹಿತಿಯ ಸಮಗ್ರ ಸಾಹಿತ್ಯ ಶೋಧಿಸಬೇಕೆಂಬ ಆಸೆಯು ನನ್ನದಾಗಿದ್ದಾಗ ಕನ್ನಡ ವಿಶ್ವವಿದ್ಯಾಲಯ ಹಂಪಿಯ ಅಡಿಯಲ್ಲಿ ನನಗೆ ಎಂ.ಫಿಲ್ ಮಾಡುವ ಅವಕಾಶ ಮಾಡಿಕೊಟ್ಟ ಮಾನ್ಯ ಕುಲಪತಿಗಳಾದ ಡಾ. ಮುರಿಗೆಪ್ಪ ಅವರಿಗೆ ಮತ್ತು ನಿಕಟಪೂರ್ವ ಕುಲಪತಿಗಳಾದ ಡಾ. ಕೆ.ವಿ. ನಾರಾಯಣ ಹಾಗೂ ಪ್ರಸ್ತುತ ಕುಲಸಚಿವರಾದ ಡಾ. ಹಿ.ಚಿ. ಬೋರಲಿಂಗಯ್ಯಾ, ಅಧ್ಯಯನಾಂಗದ ನಿರ್ದೇಶಕರಾದ ಡಾ. ಡಿ. ಪಾಂಡುರಂಗಬಾಬು, ಡಾ. ಎಸ್.ಎಸ್. ಅಂಗಡಿ, ಡಾ. ರಹಮತ್ ತರಕೇರಿ, ಡಾ. ಹಳ್ಳಿಕೇರಿ, ಡಾ. ಚನ್ನವೀರಪ್ಪ, ಡಾ. ವಿರಕ್ತಮಠ, ಮತ್ತು ಹಂಪಿ ವಿಶ್ವವಿದ್ಯಾಲಯದ ಸಮಸ್ತರಿಗೂ ಅನಂತ ಕೃತಜ್ಞತೆ ಸಲ್ಲಿಸುತ್ತೇನೆ.

ಹಂಪಿ ಕನ್ನಡ ವಿಶ್ವವಿದ್ಯಾಲಯ ಸಂಯೋಜನೆಯಲ್ಲಿ ಹಾರೂಗೇರಿ ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರದ ನಿರ್ದೇಶಕರಾದ ಡಾ. ವ್ಹಿ.ಎಸ್. ಮಾಳಿ, ಡಾ. ಗುಡಸಿ, ಡಾ. ಚಿಲುಮಿ, ಪ್ರಾಚಾರ್ಯರಾದ ಕೊಕಟನೂರ, ಮತ್ತು ಎಂ.ಫಿಲ್ ತರಗತಿಗಳಲ್ಲಿ ಮಾರ್ಗದರ್ಶನ ನೀಡಿರುವ ಡಾ. ಅಶೋಕ ನರೋಡೆ, ಡಾ. ಮರೆಗುದ್ದಿ, ಡಾ. ಗುಂಡಣ್ಣಾ ಕಲಬುರ್ಗಿ, ಡಾ. ಶಾಂತಿನಾಥ ದಿಬ್ಬದ, ಮತ್ತು ಬಿ.ಆರ್. ದರೂರ ಶಿಕ್ಷಣ ಸಂಸ್ಥೆಯ ಸರ್ವರನ್ನು ಸ್ಮರಿಸುವುದು ಸಂತಸದ ಸಂಗತಿಯಾಗಿದೆ.

ನನಗೆ ಸಲಹೆ, ಸೂಚನೆ, ತಪ್ಪುಗಳನ್ನು ತಿದ್ದಿ ಒಳ್ಳೆಯ ಮಾರ್ಗದರ್ಶನ ನೀಡಿದ ಡಾ. ಅಶೋಕ ನರೋಡೆ ಮತ್ತು ಅವರ ಕುಟುಂಬವರ್ಗಕ್ಕೂ ಹಾಗೂ ನನಗೆ ಹೆಚ್ಚು ಸಲಹೆ ಸೂಚನೆ, ತಪ್ಪು ತಡೆಗಳನ್ನು ತಿದ್ದುರುವ ಡಾ. ವ್ಹಿ.ಎಸ್. ಮಾಳಿ ಮತ್ತು ಅವರ ಕುಟುಂಬ ವರ್ಗಕ್ಕೂ ಮತ್ತು ಜ್ಯೋತಿ ಹೊಸೂರ ಅವರ ಕುಟುಂಬ ವರ್ಗಕ್ಕೂ ಡಾ. ನಿಂಗಣ್ಣಾ ಸಣ್ಣಕ್ಕಿ, ಶಿವಲಿಂಗಪ್ಪ ಭಾವಿಕಟ್ಟಿ ಅವರ ಸಲಹೆ ಸಹಕಾರ ನೀಡಿದ್ದಾರೆ. ಈ ಎಲ್ಲಾ ಮಹನೀಯರಿಗೂ ನಮನಗಳು. ನನ್ನ ಅಧ್ಯಯನಕ್ಕೆ ಒತ್ತಾಸೆಯಾಗಿ ನಿಂತ ತಂದೆ–ಬಸಪ್ಪ, ತಾಯಿ–ಲಕ್ಷ್ಮವ್ವಾ ಪತ್ನಿ–ಭಾರತಿ, ಮಕ್ಕಳಾದ ದೀಪಾ, ವಿನಯ, ನಂದಾ, ಶ್ರವಣಕುಮಾರ, ಸಹೋದರರು ಮತ್ತು ಸಹೋದರಿ ಆತ್ಮೀಯ ಮುತ್ತಪ್ಪಅಜ್ಜನವರನ್ನು ನೆನೆಯದೇ ಇರಲಾರೆ. ನನ್ನ ಆತ್ಮೀಯ ಮಿತ್ರರಾದ, ರಾಜು ಬ. ತಳವಾರ, ಸುರೇಶ ಹನಗಂಡಿ, ಪರವ್ವಗೋಳ, ನಡಟ್ಟಿ, ಒಂಟಗುಡಿ ಮತ್ತು ಗೋಕಾಕ ತಾಲೂಕಿನ ಸಮಸ್ತ ಗುರು–ಬಳಗಕ್ಕೂ ಮತ್ತು ಎಲ್ಲಾ ಸ್ನೇಹಿತರಿಗೂ ಅಚ್ಚುಕಟ್ಟಾಗಿ ಅಕ್ಷರ ಸಂಯೋಜಿಸಿದ ಶ್ರೀ ಲಕ್ಷ್ಮಣ ಮಾಳಗಿ ಅವರಿಗೂ ನನ್ನ ಅನಂತ ಕೃತಜ್ಞತೆಗಳು.

ಹಾರೂಗೇರಿ: **ಸತ್ಯಪ್ಪ. ಬಸಪ್ಪ ಪಂಗಣ್ಣವರ.**

ದಿನಾಂಕ :

ಪರಿವಿಡಿ

# ಜ್ಯೋತಿ ಹೊಸೂರ ಸಾಹಿತ್ಯದ ವಿಭಿನ್ನ ನೆಲೆಗಳು




ಚೆನ್ನಬಸವೇಶ್ವರ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಅಧ್ಯಾಯ ೧

## ಅಧ್ಯಯನದ ಉದ್ದೇಶ, ಸ್ವರೂಪ, ವೈಧಾನಿಕತೆ, ವ್ಯಾಪ್ತಿ

- ಅಧ್ಯಯನದ ಉದ್ದೇಶ
- ಅಧ್ಯಯನದ ಸ್ವರೂಪ
- ಅಧ್ಯಯನದ ವೈಧಾನಿಕತೆ
- ಅಧ್ಯಯನದ ವ್ಯಾಪ್ತಿ

## ಅಧ್ಯಾಯ-೧

# ಅಧ್ಯಯನದ ಉದ್ದೇಶ, ಸ್ವರೂಪ, ವೈಧಾನಿಕತೆ ಹಾಗೂ ವ್ಯಾಪ್ತಿ.

**ಪ್ರವೇಶ.**

ಸಾಹಿತ್ಯ ಒಂದು ನಿರಂತರ ಪ್ರವಾಹ, ಹಳೆಯ ನೀರನ್ನು ಹೊಸ ನೀರು ಕೊಚ್ಚಿಕೊಂಡಯ್ಯುವಂತೆ, ಸಾಹಿತ್ಯವು ಕಾಲಕಾಲಕ್ಕೆ ಹೊಸ ಹೊಸ ವಿಷಯ ಸೃಷ್ಠಿಯಾಗುತ್ತಾ ಹೋಗುತ್ತದೆ. ಸಾಹಿತ್ಯವು ಆ ಕಾಲದ, ಸಾಮಾಜಿಕ ಚಿತ್ರವನ್ನು ಬಿಂಬಿಸುವ ಕೆಲಸ ಮಾಡುತ್ತದೆ. ಬದುಕಿಗೆ ಬೇಕಾದ ಚಿಂತನೆಗಳನ್ನು ಕಲಾತ್ಮಕವಾಗಿ ಅಭಿವ್ಯಕ್ತಿಸುತ್ತದೆ. ಅದಕ್ಕಾಗಿಯೇ ಕಾವ್ಯಾರಾಧನೆ ನಮ್ಮ ಬದುಕಿನ ಭಾಗವಾಯಿತು. ಶ್ರೀ ವಿಜಯ ಇದನ್ನು ತನ್ನ ಕವಿರಾಜಮಾರ್ಗದಲ್ಲಿ ಹೀಗೆ ಅಭಿವ್ಯಕ್ತಿಸಿದ್ದಾನೆ. –

"ಪಾಪಮಿದು ಪುಣ್ಯಮಿದು ಹಿತ.
ರೂಪಮಿದಹಿತ ಪ್ರಕಾಶಮಿದು ಸುಖಮಿದುದು: ।
ಖೋ ಪಾತ್ತಮಿದೆಂದ ರಿಪುಗ.
ಮಾ ಪರಮಕವಿಪ್ರಧಾನರಾ ಕಾವ್ಯಂಗಳ್ ॥"[೧]

ಜನ ಬದುಕಬೇಕೆಂದು ಕಾವ್ಯ ರಚಿಸಿದ ಕವಿಗಳುಂಟು. ಸಾಹಿತ್ಯ ಬದುಕಿಗೆ ರಸಾಮೃತ. ಕವಿ ನೇಮಿಚಂದ್ರ–'ಮಹಾಕಾವ್ಯವು ಭುವನಭಾಗ್ಯದಿಂದ ಮೂಡಿಬರುತ್ತದೆ' ಎನ್ನುತ್ತಾನೆ. ಸಾಹಿತಿಗಳು ಒಂದು ನಾಡಿನ ಸಾಂಸ್ಕೃತಿಕ ವಾರುಸುದಾರರು. ಆದ್ದರಿಂದ ಕವಿ ಕಾವ್ಯದ ಅಧ್ಯಯನ ಅಗತ್ಯವೆನಿಸುತ್ತದೆ.

ರಾಯಬಾಗ ತಾಲೂಕು ಪ್ರಾಚೀನ ಕಾಲದಲ್ಲಿ 'ಬಾಗೇನಾಡು' ಎಂದು ಪ್ರಸಿದ್ಧಿ ಪಡೆದಿತ್ತು. ಬಾಗೇನಾಡು ಕುಹುಂಡಿ ಮೂರು ಸಾವಿರದ ಒಂದು ಆಡಳಿತದ ವಿಭಾಗವಾಗಿತ್ತು. ಬಹುಕಾಲ ಜೈನ ಧರ್ಮದ ಕೇಂದ್ರವಾಗಿತ್ತು. ಹಾಗೂ ಇತ್ತೀಚಿಗೆ ರಾಯಬಾಗದಲ್ಲಿ ಉತ್ಕನನದಲ್ಲಿ ದೊರೆತ ಹದಿನೆಂಟು ಜೈನ ವಿಗ್ರಹಗಳು ಕೂಡ ಇದೇ ಅಂಶದತ್ತ ಹೊಸ ಬೆಳಕು ಚೆಲ್ಲುತ್ತದೆ. ಬೆಳಗಾವಿ ಜಿಲ್ಲೆಯ ಅತ್ಯಂತ ಪ್ರಾಚೀನ ಕವಿ ರಾಜಾದಿತ್ಯ ಈ ನಾಡಿನವನು. ಆತ ತನ್ನ ವ್ಯವಹಾರ ಗಣಿತದಲ್ಲಿ ಪೂವಿನ ಬಾಗೆಯನ್ನು ಸುಂದರವಾಗಿ ಬಣ್ಣಿಸಿದ್ದಾನೆ. ಈತ 'ಕನ್ನಡದ ಗಣಿತ ಭಾಸ್ಕರ' ಬೆಳಗಾವಿ ಜಿಲ್ಲೆಯ ಸಾಹಿತ್ಯ ಚರಿತ್ರೆಯ ಮೊದಲ ಪುಟ ಕವಿ ರಾಜಾದಿತ್ಯನಿಗೆ ಮೀಸಲು.

ದಕ್ಷಿಣ ಭಾರತದಲ್ಲಿ ದೊರೆತ ರಾಷ್ಟ್ರಕೂಟರ ಅತ್ಯಂತ ಪ್ರಾಚೀನ ತಾಮ್ರಪಟ ಶಾಸನವು ಈ ನಾಡಿನ ಜೈನ ಮುನಿಯನ್ನು ಉಲ್ಲೇಖಸುತ್ತದೆ. ಗೋಕಾಕದಲ್ಲಿ ದೊರೆತ ಈ ತಾಮ್ರಪಟ ಶಾಸನದಲ್ಲಿ 'ದೆಜ್ಜ ಮಹಾರಾಜನ ನೆಚ್ಚಿನ ವಿಜಯಾನಂದ ಮಧ್ಯಮ ರಾಜನಮಗ ಅಧಿರಾಜ ಇಂದ್ರ ಜಂಬೂ ಖಾಂಡ ಗಣದ ಆಚಾರ್ಯ

ಆರ್ಯನಂದನಿಗೆ ಕುಹುಂಡಿ ವಿಷಯದ ಜಲಾರ್ ಗ್ರಾಮ ಮತ್ತು ಪೂರ್ವಿನ ಗ್ರಾಮಗಳಲ್ಲಿ ಐವತ್ತು ನಿವರ್ತನ ಭೂಮಿಯನ್ನು ದಾನ ನೀಡಿದನೆಂದು' ಹೇಳಲಾಗಿದೆ.

ಈ ಶಾಸನದಲ್ಲಿ ಪ್ರಸ್ತಾಪಗೊಂಡ ಜಲಾರ್‌ಗ್ರಾಮ ಇಂದಿನ ರಾಯಬಾಗ ತಾಲೂಕಿನ ಜಲಾಲಪೂರ, ಪೂರ್ವಿನ ಗ್ರಾಮವೆಂದರೆ ಪೂವಿನಬಾಗೆ ಅವೆರಡು ಹತ್ತಿರದ ಗ್ರಾಮಗಳು, ಬಹುಶಃ ಆಚಾರ್ಯ ಆರ್ಯನಂದ ಬಾಗೇನಾಡಿನ ಮೊದಲ ಸಾಂಸ್ಕೃತಿಕ ವ್ಯಕ್ತಿಯಾಗಿರಬೇಕು. ಅನಂತರದ ಸ್ಥಾನ ರಾಜಾದಿತ್ಯನದು. ರಾಜಾದಿತ್ಯನ ಕಾಲ ಕ್ರಿ.ಶ. ಸುಮಾರು ೧೧೫೦ ಅನಂತರ ೧೯ನೇ ಶತಮಾನದವರೆಗೂ ಈ ನಾಡಿನ ಸಂಸ್ಕೃತಿಕ ಚರಿತ್ರೆ ಅಜ್ಞಾತವಾಗಿಯೆ ಉಳಿದಿದೆ.

೧೮ ನೇ ಶತಮಾನದ ಉತ್ತರಾರ್ಧದಲ್ಲಿ ಜನಪದ ಕವಿಗಳು ಬೆಳಕಿಗೆ ಬಂದದ್ದು ತಿಳಿಯುತ್ತದೆ. ಅಲ್ಲಿಯವರೆಗೂ ಇಲ್ಲಿಯ ಸಾಹಿತ್ಯವಾಹಿನಿ ಗುಪ್ತಗಾಮಿನಿಯಾಗಿ ಹರಿದಿದೆ. ಅಲಬೇರಿ, ರಾಚೋಟ, ಕಲಸಿದ್ದ, ರಾಚಯ್ಯಾ, ಕಲಮ್ಮೇಶ್ವರ, ಮೀರಾಸಾಬ, ಬಾಬಾಜಿ ಜಮಾದಾರರಂತಹ ಕೆಲವು ಜನಪದ ಕವಿಗಳು ಇಲ್ಲಿ ಪ್ರಸಿದ್ಧಿರಾಗಿದ್ದರು. ರಾಜಾದಿತ್ಯನ ನಂತರ ಬಾಗೆನಾಡಿನ ಸಂಸ್ಕೃತಿಯ ಚರಿತ್ರೆಯಲ್ಲಿ ಹೆಚ್ಚು ಮುಖ್ಯರಾದವರು. ಪ್ರೊ ಜ್ಯೋತಿ ಹೊಸೂರ ಈ ನಾಡಿನ ಸಾಹಿತ್ಯ ಚರಿತ್ರೆಯನ್ನು ಐದು ಪ್ರಮುಖ ಘಟ್ಟಗಳಲ್ಲಿ ವರ್ಗಿಕರಿಸಬಹುದು.

೧. ಆರ್ಯನಂದಿ ಘಟ್ಟ

೨. ರಾಜಾದಿತ್ಯ ಘಟ್ಟ.

೩. ಅಲಬೇರಿ ಘಟ್ಟ.

೪. ಜ್ಯೋತಿ ಹೊಸೂರ ಘಟ್ಟ

೫. ಡಾ. ವ್ಹಿ.ಎಸ್. ಮಾಳಿಯವರ ಘಟ್ಟ.

ಮೊದಲೆರಡು ಘಟ್ಟಗಳ ಚರಿತ್ರೆ ತಿಳಿಯುವುದಿಲ್ಲ. ಮೂರನೇ ಘಟ್ಟದ ಚರಿತ್ರೆ ಸಮಗ್ರವಾಗಿಲ್ಲ. ಜ್ಯೋತಿ ಹೊಸೂರರವರ ಮೂಲಕ ರಾಯಬಾಗ ಸಾಹಿತ್ಯ ಚರಿತ್ರೆಯಲ್ಲಿ ಪಾಲು ಪಡೆಯುತ್ತದೆ. ಅದು ಬೆಳಗಾವಿ ಜಿಲ್ಲೆಯಲ್ಲಿ ಸಾಹಿತ್ಯದ ವಾತಾವರಣ ನಿರ್ಮಾಣ ಗೊಂಡಕಾಲ. ಜ್ಯೋತಿ ಹೊಸೂರ ಕೇವಲ ಒಬ್ಬ ವ್ಯಕ್ತಿಯಾಗಿರದೆ ಆ ಕಾಲದ ಒಂದು ಸಾಂಸ್ಕೃತಿಕ ಶಕ್ತಿ. ಅವರ ಸಾಹಿತ್ಯವನ್ನು ಅಧ್ಯಯನ ಮಾಡುವದೆಂದರೆ ರಾಯಬಾಗದ ನಾಲ್ಕನೆಯ ಘಟ್ಟದ ಸಾಹಿತ್ಯ ಚರಿತ್ರೆಯನ್ನು ಸೂಕ್ಷ್ಮವಾಗಿ ಸಮೀಕ್ಷಿಸುವುದು. ಅದನ್ನು ಪೂರೈಯಿಸುವ ಒಂದು ಕಿರು ಪ್ರಯತ್ನ ಪ್ರಸ್ತುತ ಸಂಪ್ರಬಂಧ ಆಶಯವಾಗಿದೆ.

**೧.೧: ಅಧ್ಯಯನ ಉದ್ದೇಶ :**

ಜ್ಯೋತಿ ಹೊಸೂರ ಮೂಲತಃ ರಾಯಬಾಗ ತಾಲೂಕಿನ ಮುಗಳಖೋಡದವರು ಅವರು ಬದುಕಿನ ಬಹುಕಾಲ ಕಳೆದದ್ದು ರಾಯಬಾಗದಲ್ಲಿಯೆ. ಈ ಭಾಗದಲ್ಲಿ ಸಾಹಿತ್ಯ

ಮತ್ತು ಸಾಂಸ್ಕೃತಿಕ ವೇದಿಕೆಗಳನ್ನು ನಿರ್ಮಿಸಿ ಸಾಹಿತಿಗಳ ಪಡೆ ಸಿದ್ಧಗೊಳಿಸಿದರು. ಅವರು ಆಳವಾಗಿ ಬೆಳೆಯಲಿಲ್ಲ ಬದಲಾಗಿ ಭತ್ತದಂತೆ ಸಾಹಿತ್ಯ ಗದ್ದೆ ನಿರ್ಮಿಸಿದರು. ಕಾಲಗತಿ ಪ್ರಕಾಶನವನ್ನು ಹುಟ್ಟುಹಾಕಿ ಹಲವು ಪ್ರಕಾಶನಗಳಿಗೆ ಪ್ರೇರಣೆಯಾದರು. ಕವಿಗಳಿಗೆ ಸ್ಫೂರ್ತಿಯಾದರು. ಸಾಹಿತಿಗಳ ಬೆನ್ನು ಚಪ್ಪರಿಸಿ ಅವರ ಅಭಿವ್ಯಕ್ತಿಗೆ ಶಕ್ತಿ ತುಂಬಿದರು. ಬಾಗೇನಾಡಿನ ಸಾಂಸ್ಕೃತಿಕ ಚೈತನ್ಯವೆಂದರೆ ಜ್ಯೋತಿ ಹೊಸೂರ ಎನ್ನುವಷ್ಟರ ಮಟ್ಟಿಗೆ ಬೆಳೆದವರು. ಆದ್ದರಿಂದ ಅವರ ಸಾಂಸ್ಕೃತಿಕ ಬದುಕು ಹಾಗೂ ಸಾಹಿತ್ಯವನ್ನು ಅಧ್ಯಯನಕ್ಕೊಳಪಡಿಸುವುದು ಮುಖ್ಯವಾದ ಆಶಯವಾಗಿದೆ. ಆ ನಿಟ್ಟಿನಲ್ಲಿ ಪ್ರಸ್ತುತ ಪ್ರಬಂಧವನ್ನು ರಚಿಸಲು ಉದ್ದೇಶಿಸಲಾಗಿದೆ.

ಜ್ಯೋತಿ ಹೊಸೂರರವರ ಸಾಹಿತ್ಯದ ಒಳನೋಟಗಳೆಂದರೆ ಸ್ಥೂಲವಾದ ಅರ್ಥದಲ್ಲಿ ರಾಯಬಾಗ ತಾಲೂಕಿನ ೨೦ನೇ ಶತಮಾನದ ಸಾಹಿತ್ಯದ ದರ್ಶನವಾಗಿದೆ. ಜ್ಯೋತಿ ಹೊಸೂರ ಆ ಕಾಲದಲ್ಲಿ ಮಾಡಿದ ಕೆಲಸ ದೊಡ್ಡದು. ಅವರ ಬರೆದ ಪ್ರಸ್ತಕಗಳ ಸಂಖ್ಯೆ ಕಡಿಮೆ, ಆದರೆ ಹಲವಾರು ಕೃತಿಗಳಿಗೆ ಸ್ಫೂರ್ತಿಯಾಗಿದ್ದರು ಎಂಬುದನ್ನು ಕಡೆಗಣಿಸಿಲಾಗುವದಿಲ್ಲ.

ರಾಯಬಾಗ ಬಹುಕಾಲ ಮರಾಠರ ಆಡಳಿತಕ್ಕೆ ಒಳಪಟ್ಟಿತ್ತು. ಇತ್ತಿಚಿನವರೆಗೂ ಅಲ್ಲಿಯ ಮರಾಠಿ ಪ್ರಮುಖ ಭಾಷೆಯಾಗಿತ್ತು. ಅದು ಕನ್ನಡ ಪ್ರಾಚೀನ ನೆಲೆಯಾಗಿದರೂ ಸಹ ಮರಾಠಿಯ ಹೊಡೆತಕ್ಕೆ ಕನ್ನಡ ನೆಲಕಚ್ಚಿತು. ಕನ್ನಡ ಬರಡುಗೊಳ್ಳತ್ತಿದ್ದ ಸಂದರ್ಭದಲ್ಲಿ ಅದಕ್ಕೆ ಹೊಸ ಜೀವ ತುಂಬಿದವರು ಜ್ಯೋತಿ ಹೊಸೂರರು. ಈ ಪ್ರದೇಶದಲ್ಲಿ ಕನ್ನಡ ಜಾಗೃತಿ ಮೂಡಿಸಿ, ಕನ್ನಡ ಬಾಷೆಯನ್ನು ಬೆಳೆಸಿದವರು ಪತ್ರಿಕೆ ಹಾಗೂ ಪ್ರಕಾಶನ ಸಂಸ್ಥೆಗಳ ಮೂಲಕ ಕನ್ನಡ ಸಾಹಿತ್ಯಕ್ಕೆ ಕಸುವು ತುಂಬಿದ್ದರು. ತಮ್ಮ ಕೃತಿ ಪುಷ್ಪಗಳಿಂದ ಕನ್ನಡ ದೇವಿಯನ್ನು ಅರ್ಚಿಸಿದ್ದರು.

ಬೆಳಗಾವಿ ಜಿಲ್ಲೆಯ ಸಂಶೋಧನೆ ರತ್ನ ಶಂಬಾಜೋಷಿ, ಇವರು ವೈಚಾರಿಕ ಚಿಂತಕ ಇತಿಹಾಸವನ್ನು ಕಟ್ಟುವಲ್ಲಿ ಸಿದ್ಧಹಸ್ತರು. ಅವರ ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿದ ಜ್ಯೋತಿ ಹೊಸೂರ ಅವರ ಪ್ರಭಾವಗೊಳಗಾದರು. ಶಂಬಾಜೋಷಿಯವರು ಸಾಹಿತ್ಯಕ್ಕೆ ಬೆಳಕು ನೀಡುವ ದೀಕ್ಷೆ ಸ್ವೀಕರಿಸಿದ್ದರು. ಶಂಭಾ ಜೋಷಿ ನೆನಪಾದರೆ ಜ್ಯೋತಿ ಹೊಸೂರ ನೆನಪಾಗುತ್ತಾರೆ. ಜೋಷಿ–ಜ್ಯೋತಿ ಒಂದೇ ನಾಣ್ಯದ ಎರಡು ಮುಖಗಳು ವಿಸ್ಮಯವೆಂದರೆ ಶಂಬಾ ಜೋಷಿಯವರು ಗುರ್ಲಹೊಸೂರ, ಜ್ಯೋತಿಯವರ ಮನೆತನದ ಹೆಸರು ಹೊಸೂರ ಈ ಬಾಹ್ಯ ಸಂಬಂಧ ಕಾಕತಾಳಿಯವೆನಿಸಿದ್ದರು. ಅಂತರಂಗದೊಳಗೆ ಜ್ಯೋತಿ ಹೊಸೂರ ಶಂಬಾ ಭಕ್ತರು, ಅವರಲ್ಲಿ ವೈಚಾರಿಕ ಚಿಂತನೆಯ ನೆಲೆಗಟ್ಟು ನಿರ್ಮಿಸಿದ್ದವರು ಶಂಬಾಜೋಷಿ.

ಹೊಸೂರರವರ ವ್ಯಕ್ತಿತ್ವ ವೈವಿಧ್ಯಮಯವಾದದ್ದು. ಒಂದು ಅರ್ಥದಲ್ಲಿ ಅವರ

ಸಾಹಿತ್ಯಕ್ಕಿಂತಲೂ ಅವರ ವ್ಯಕ್ತಿತ್ವದ ಅಧ್ಯಯನ ಯೋಗ್ಯವಾದದ್ದು, ಅವರ ವ್ಯಕ್ತಿತ್ವ ನಾಲ್ಕು ಮುಖಗಳು ಇಂತಿವೆ.

೧. ಸಾಹಿತಿ

೨. ಜನಪದ ಅಧ್ಯಯನ-ಸಂಪಾದನ-ಪ್ರಕಟಣೆ

೩. ಸಂಶೋಧನೆ

೪. ಸಂಘಟನೆ

ಇವು ಅವರ ಸಾಹಿತ್ಯದ ವಿಭಿನ್ನ ನೆಲೆಗಳು, ಸಾಮಾನ್ಯವಾಗಿ ಸಾಹಿತಿಗಳು ಕಾವ್ಯದ ಮೂಲಕವೇ ಸಾರಸ್ವತಲೋಕವನ್ನು ಪ್ರವೇಶಿಸುವರು. ಆದರೆ ಹೊಸೂರರು ಸಾಹಿತ್ಯ ಲೋಕ ಪ್ರವೇಶಸಿದ್ದು ಜಾನಪದ ನೆಲೆಯಿಂದ, ಇವರ ಮೊದಲ ಕೃತಿ 'ಬೆರಸಿ ಇಟ್ಟೀನಬೆಲ್ಲ ನೆನೆಗಡಲಿ' ಇದು ಜನಪದ ತ್ರಿಪದಿ ಸಂಕಲನ ೧೯೬೯ ರಲ್ಲಿ ಪ್ರಕಟಗೊಂಡ ಈ ಕೃತಿ ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾಯಿತು. ಹೊಸೂರರ ಸಾಹಿತ್ಯ ಸೇವೆಗೆ ವೇದಿಕೆ ನಿರ್ಮಿಸಿತು. ಆ ಮೂಲಕ ಅವರು ಜಾನಪದ ಅಧ್ಯಯನದತ್ತ ಹೆಚ್ಚು ಗಮನ ಹರಿಸುವಂತಾಯಿತು. ಅವರ ಒಟ್ಟು ಕೃತಿಗಳ ಸಂಖ್ಯೆ ೨೦ ಇವುಗಳಲ್ಲಿ ೪ ಸಂಪಾದನೆಗಳು.

೧೯೭೭ ರ ಸಂದರ್ಭದಲ್ಲಿ 'ಕಾಲ' ಎಂಬ ಸಾಹಿತ್ಯಿಕ ಪತ್ರಿಕೆಯನ್ನು ಆರಂಭಿಸಿದರು. ಅದು ವರ್ಷದಲ್ಲಿ ಮೂರು ಸಲ ಪ್ರಕಟಣೆಗೊಳ್ಳುತಿತ್ತು. ಬೇಸಿಗೆ-ಮಳೆ-ಚಳಿಗಾಲಗಳನ್ನು ಪ್ರತಿ ನಿಧಿಸುವ ಮೂರು ಸಂಚಿಕೆಗಳು ಪ್ರಕಟಗೊಳುತ್ತಿದ್ದವು. ವಿಶಿಷ್ಟವಾದ ಸಾಹಿತ್ಯಿಕ ಪತ್ರಿಕೆ ರಾಯಬಾಗದಂತಹ ತೀರ ಹಿಂದೂಳಿದ ಪ್ರದೇಶದಲ್ಲಿ ಸಾಹಿತ್ಯಿಕ ಪ್ರಜ್ಞೆ ಮೂಡಿಸಿದ್ದು ಶ್ಲಾಘನೀಯ. ಎರಡು ವರ್ಷಗಳ ಕಾಲ ಆರು ಸಂಚಿಕೆಗಳನ್ನು ಪ್ರಕಟಿಸಿದ ಕಾಲ ಆನಂತರ ೧೯೭೯ ರಲ್ಲಿ 'ಕಾಲಗತಿ' ಪ್ರಕಾಶನವಾಗಿ ಹೆಸರನ್ನು ಬದಲಿಸಿತು. 'ಕಾಲಗತಿ' ಪ್ರಕಾಶ ಸಂಸ್ಥೆ ಪ್ರಗತಿಶೀಲ ವಿಚಾರಧಾರೆಯ ೨೧ ಗ್ರಂಥಗಳನ್ನು ಪ್ರಕಟಿಸಿತು. 'ಕಾಲಗತಿ'ಯ ಪ್ರೇರಣೆಯಿಂದ ರಾಯಬಾಗದಲ್ಲಿ 'ಸಂಘರ್ಷ ಸಾಹಿತ್ಯ ಕೂಟ' ಎಂಬ ಮತ್ತೊಂದು ಪ್ರಕಾಶ ಆರಂಭಗೊಂಡಿತು. ಹಾರೂಗೇರಿಯಲ್ಲಿ 'ಸ್ನೇಹಕುಂಜ' ವಿಚಾರ ವೇದಿಕೆ ನಿರ್ಮಾಣಗೊಳ್ಳಲು ಜ್ಯೋತಿ ಹೊಸೂರರ ಪ್ರಭಾವವೇ ಕಾರಣ, ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನ ಜ್ಯೋತಿ ಹೊಸೂರರ ಸಾಂಸ್ಕೃತಿಕ ವ್ಯಕ್ತಿತ್ವವನ್ನು ಅನಾವರಣಗೊಳಿಸಲು ಪ್ರಯತ್ನಿಸಲಾಗಿದೆ.

ಹೊಸೂರ ವಿಚಾರವಾದಿ, ಅವರ ಸಾಹಿತ್ಯದಲ್ಲಿ ವೈಚಾರಿಕತೆಯದೆ ಮೇಲುಗೈ, ಅವರು ಯಾವುದೇ ವಿಷಯವನ್ನು ವೈಚಾರಿಕ ಹಿನ್ನೆಲೆಯಲ್ಲಿಯೇ ಚಿಂತಿಸಿದವರು. ಜಾನಪದ ಅವರ ಅಧ್ಯಯನ ಆಸಕ್ತಿಯ ಕ್ಷೇತ್ರವಾಗಿದ್ದರೂ, ಅದನ್ನು ಮೀರಿ ಬೆಳೆದ ಶ್ರೇಯಸ್ಸು ಅವರದು. ಇದರಿಂದ ಅವರ ಸಾಹಿತ್ಯದ ಅಧ್ಯಯನಕ್ಕೆ ವಿಭಿನ್ನ ನೆಲೆಗಳ ಪ್ರಾಪ್ತವಾದವು ಆ ವಿಭಿನ್ನ ನೆಲಗಳ ಸಮಗ್ರ ದರ್ಶನದ ಉದ್ದೇಶ, ಪ್ರಸ್ತುತ ಸಂಪ್ರಬಂಧ ಹೊಂದಿರುತ್ತದೆ.

## ೧.೨ : ಅಧ್ಯಯನದ ಸ್ವರೂಪ :

'ಬೆರಸಿ ಇಟ್ಟೀನ ಬೆಲ್ಲ ನೆನಗಡಲಿ' ಹಾಗೂ 'ಹೆಸರ ಹೇಳ್ತಿನಿ ಒಡಪಕಟ್ಟಿ' ಜ್ಯೋತಿ ಹೊಸೂರರ ಜಾನಪದ ಸಂಕಲನಗಳು. ಮೊದಲನೆಯದು ತ್ರಿಪದಿ ಸಂಕಲನ. ಎರಡನೆಯದು ಒಡಪುಗಳ ಸಂಕಲನ. ೧೯೭೮ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಬಿ.ಎ. ಭಾಗ ಒಂದರ ಕನ್ನಡ ಉಪಪ್ರಧಾನ ವಿಷಯದ ಪಠ್ಯ ಪುಸ್ತಕವಾಗಿತ್ತು. ಇದಕ್ಕೆ ಖ್ಯಾತ ವಿದ್ವಾಂಸರಾದ ಡಾ ಆರ್.ಸಿ. ಹಿರೇಮಠರು ಮುನ್ನುಡಿ ಬರೆದು ಇದರ ತೂಕ ಗರತಿಯ ಹಾಡುಗಳ ತೂಕದಷ್ಟಿದೆ ಎಂದು ಶ್ಲಾಘಿಸಿದ್ದಾರೆ.

'ಹೆಸರ ಹೇಳ್ತಿನಿ ಒಡಪಕಟ್ಟಿ' ೧೯೭೧ ಕೃತಿಗೆ ಡಾ ಬೆಟಗೇರಿ ಕೃಷ್ಣಶರ್ಮರು ಮುನ್ನುಡಿ ಬರೆದಿದ್ದು, ಹೊಸೂರರ ಅಧ್ಯಯನ ಕ್ರಮ ಹಾಗೂ ಆಸಕ್ತಿಗಳನ್ನು ಮೆಚ್ಚಿರುವರು. ಎರಡು ಕೃತಿಗಳ ಪ್ರಕಟಣೆಯ ನಂತರ ಹೊಸೂರ ಜಾನಪದ ಸಂಶೋಧನೆಯತ್ತ ಹೊರಳಿದ್ದರು. 'ಜಾನಪದ ಉಪಾಸನೆ', 'ಕನಕದಾಸರಜೀವನವಿಚಾರ', 'ಜಾತಿಗಾರ ಜಾತಕ', 'ಡೊಳ್ಳಿನ ಹಾಡುಗಳ ಸಮೀಕ್ಷೆ', 'ಬೀರಪ್ಪದೇವರ ಮೂವರು ಭಕ್ತರು' ಪ್ರಮುಖ ಜಾನಪದ ಸಂಶೋಧನಾ ಕೃತಿಗಳು.

ಇವೆಲ್ಲವುಗಳ ಜೊತೆಗೆ 'ಕಾಲ', ಹಾಗೂ 'ಕಾಲಗತಿ'ಗಳ ಸಂಪಾದಕರಾಗಿ ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆ ಸ್ಮರಣೀಯವಾದದ್ದು. ಜೊತೆಗೆ ಅವರ ಸಂಸ್ಕೃತಿಕ ಚಟುವಟಿಕೆಗಳು ಅನೇಕ ಸಾಹಿತಿಗಳಿಗೆ ಪ್ರೇರಣೆಯಾದವು. ಇವು ಜ್ಯೋತಿ ಹೊಸೂರರ ಸಾಂಸ್ಕೃತಿಕ ವ್ಯಕ್ತಿತ್ವದ ಮುಖ್ಯ ನೆಲೆಗಳು ಅವುಗಳನ್ನು ಅವರ ಸಾಹಿತ್ಯ ವಿಂಗಡನೆಗೆ ಅಳತೆಗೊಲಾಗಿಸಿ ಪ್ರಸ್ತುತ ಪ್ರಬಂಧವನ್ನು ರೂಪಿಸಲಾಗಿದೆ.

## ೧.೩: ಅಧ್ಯಯನದ ವೈಧಾನಿಕತೆ :

ಈ ಅಧ್ಯಯನವು ಐದು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲನೆಯದು ಅಧ್ಯಯನದ ಉದ್ದೇಶ, ಸ್ವರೂಪ, ವೈಧಾನಿಕತೆ ಹಾಗೂ ವ್ಯಾಪ್ತಿಯನ್ನು ವಿವರಿಸುವುದು ಜೊತೆಗೆ ಅಧ್ಯಯನದ ಅಗತ್ಯವನ್ನು ಪ್ರತಿಪಾದಿಸುವುದು.

ಅಧ್ಯಾಯ ಎರಡು-ಹೊಸೂರರ ಸಾಹಿತ್ಯದ ಮುಖ್ಯ ನೆಲೆಗಳನ್ನು ಗುರುತಿಸಿ ಅವರ ಕೃತಿಗಳನ್ನು ವರ್ಗೀಕರಿಸುವುದು. ವಿಮರ್ಶೆ, ಸಂಶೋಧನೆ, ಸಂಪಾದನೆ, ವೈಚಾರಿಕ ಚಿಂತನೆ ಮೊದಲಾದ ನೆಲೆಗಳಲ್ಲಿ ಬೆಳೆದ ಹೊಸೂರರ ಸಾಹಿತ್ಯದ ಮೌಲ್ಯ ಮಾಪನ ವೈಧಾನಿಕತೆಯ ಸ್ಥೂಲ ನಕ್ಷೆ ಇಲ್ಲಿದೆ.

ಈ ವಿಭಿನ್ನ ನೆಲೆಗಳೆ ಮುಂದಿನ ನಾಲ್ಕು ಅಧ್ಯಾಯಗಳಿಗೆ ಅಧ್ಯಯನದ ವಸ್ತು ಒದಗಿಸುತ್ತೇವೆ. ಜಾನಪದಿಯ ನೆಲೆಯ ಅಧ್ಯಯನಕ್ಕೆ ಮೂರನೇಯ ಅಧ್ಯಾಯ ಮೀಸಲು ಇದೆ. ಈ ಅಧ್ಯಾಯದಲ್ಲಿ ಅವರ ಜಾನಪದ ಸಂಕಲನ, ಹಾಗೂ ಸಂಶೋಧನಾ ಕೃತಿಗಳನ್ನು ವಿವೇಚಿಸಲಾಗಿದೆ.

ನಾಲ್ಕನೆಯ ಅಧ್ಯಾಯ ಹೊಸೂರರ ಸಾಹಿತ್ಯದ ಸಾಂಸ್ಕೃತಿಕ ನೆಲೆಯನ್ನು

ತೆರೆದಿಡುತ್ತದೆ. ಹೊಸೂರರ ಸಾಂಸ್ಕೃತಿಕ ಚಿಂತನೆಯನ್ನು ಪ್ರಸ್ತುತ ಪಡಿಸುವ ಕೃತಿಗಳ ಮೌಲ್ಯಮಾಪನ ಇಲ್ಲಿದೆ. ಇದರಲ್ಲಿ ಅವರ ಸಾಹಿತ್ಯ ವಿವಿಧ ಸಂಘಟನೆಗಳಿಗೆ ಸ್ಫೂರ್ತಿ ನೀಡಿದ ವಿವರಗಳನ್ನು ದಾಖಲಿಸಲಾಗಿದೆ.

ಜ್ಯೋತಿ ಹೊಸೂರರ ಪ್ರಕಟಣಾ ಸಂಸ್ಥೆಯೊಂದನ್ನು ಕಟ್ಟಿ ಬೆಳೆಯಿಸಿದ ಶ್ರೀಮಂತರು. ಆ ಪ್ರಕಟಣೆಗಳ ವಿವರಗಳನ್ನು ಇದೇ ಅಧ್ಯಯನದಲ್ಲಿ ದಾಖಲಿಸಲಾಗಿದೆ. ಈ ಅಧ್ಯಯನದ ಐದನೇ ಅಧ್ಯಾಯ ಸಮಾರೋಪ, ಪ್ರಸ್ತುತ ಸಂಪ್ರಬಂಧದ ಫಲಿತಗಳನ್ನು ಇಲ್ಲಿ ಸಂಕ್ಷೇಪ್ತವಾಗಿ ಕ್ರೋಢಿಕರಿಸಲಾಗಿದೆ.

**೧.೪: ಅಧ್ಯಯನದ ವ್ಯಾಪ್ತಿ :**

ಇದು ಕಾಲಮಿತಿಯ ಅದ್ಯಯನವಾಗಿರುವುದರಿಂದ ಇದಕ್ಕೆ ಹಲವು ಪರಿಮಿತಿಗಳಿವೆ. ಇಲ್ಲಿ ಹೊಸೂರರ ಸಾಹಿತ್ಯವನ್ನು ಬೆಲೆಕಟ್ಟುವಾಗ ಅವರ ಸಮಕಾಲಿನ ಸದಭಿರುಚಿಯ ಸಾಹಿತಿಗಳೊಂದಿಗೆ ತೌಲನಿಕವಾಗಿ ನೋಡಬಹುದಿತ್ತು. ಡಾ. ಎಮ್.ಎನ್.ವಾಲಿ, ಡಾ ನಿಂಗಣ್ಣ ಸಣ್ಣಕ್ಕಿ, ಡಾ. ಶ್ರೀರಾಮ ಇಟ್ಟಣ್ಣವರ, ಜ್ಯೋತಿ ಹೊಸೂರರ ಸಮಕಾಲಿನರು ಮಾತ್ರವಲ್ಲದೆ ಸಮಕಾಲಿನ ಹವ್ಯಾಸಿಗಳು. ಇವರೆಲ್ಲರೂ ಬೆಳಗಾವಿಯ ಪರಿಸರದವರು ಇವರೊಂದಿಗೆ ಡಾ. ಎಂ.ಎಸ್. ಲಠ್ಠೆ ಹಾಗೂ ಡಾ. ಬಸವರಾಜ ಮಲಶೆಟ್ಟಿಯವರನ್ನು ಸೇರಿಸಬಹುದು. ಆದರೆ ಸಂಪ್ರಬಂಧದ ವ್ಯಾಪ್ತಿಯನ್ನು ಗಮನಿಸಿ ಅದನ್ನು ಕೈ ಬಿಡುವ ಅನಿವಾರ್ಯತೆ ಒದಗಿತು. ಮೇಲೆ ಸೂಚಿಸಿದ ವ್ಯಾಪ್ತಿಯಲ್ಲಿಯೇ ಈ ಸಂಪ್ರಬಂಧವನ್ನು ಸಿದ್ದಪಡಿಸಲಾಗಿದೆ.

**ಕೊನೆ ಟಿಪ್ಪಣೆಗಳು :**


೧. ಶ್ರೀ ವಿಜಯ : **'ಕವಿರಾಜಮಾರ್ಗ'** ಪುಟ : ೧–೧೮. (ಸಂ) ಡಾ.ಕೆ. ಕೃಷ್ಣಮೂರ್ತಿ ಐ.ಬಿ.ಎಚ್ ಪ್ರಕಾಶನ ಬೆಂಗಳೂರು ೧೯೮೩.

೨. ಡಾ ಆರ್.ಎಂ. ಷಡಕ್ಷರಯ್ಯಾ : **'ಬೆಳಗಾವಿ ಜಿಲ್ಲೆಯ ಶಾಸನಗಳು'** ಪುಟ–೧೧ ಬೆಳಗಾವಿ–ಬೆಳಕು ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು. – ೨೦೦೩.

# ಅಧ್ಯಾಯ – ೨ :

## ಹೊಸೂರರ ಸಾಹಿತ್ಯದ ನೆಲೆಗಳು

೨.೧ ಹೊಸೂರರ ಕೃತಿಗಳ ವರ್ಗೀಕರಣ

೨.೨ ಜಾನಪದೀಯ ನೆಲೆ

೨.೩ ಸಾಂಸ್ಕೃತಿಕ ನೆಲೆ

## ಅಧ್ಯಾಯ-೨

# ಹೊಸೂರರ ಸಾಹಿತ್ಯದ ನೆಲೆಗಳು

ಹೊಸೂರರ ಸಾಹಿತ್ಯ ವೈವಿಧ್ಯಮಯವಾದುದು. ಕುವೆಂಪು ಅವರಂತೆ ಗದ್ಯಕ್ಕೆ ಕಾವ್ಯದ ದೀಕ್ಷೆ ಕೊಟ್ಟವರು. ಇವರು ಯಾವುದನ್ನೇಆಗಲಿ, ಯಾವುದನ್ನೇಮಾಡಲಿ ಅಲ್ಲಿ ಒಪ್ಪು ಓರಣಗಳಿರುತ್ತದೆ. ಅವರದು ತೂಕಬದ್ಧ ಮಾತು, ತೂಕಬದ್ಧ ಬರಹ, ಅಳದು-ಸುರಿದು, ಒಂದು ಸಲ ವಿಚಾರ ಮಾಡಿದ ನಂತರವೇ ಒಂದು ನಿರ್ಧಾರಕ್ಕೆ ಬರುವ ವೈಚಾರಿಕ ವ್ಯಕ್ತಿತ್ವ ಹೊಂದಿದ್ದಾರೆ.

ವಿಮರ್ಶೆ, ಸಂಶೋಧನೆ, ವೈಚಾರಿಕಚಿಂತನೆ, ಸಂಪಾದನೆ ಹೀಗೆ ವಿವಿಧ ನೆಲೆಗಳಲ್ಲಿ ವಿಭಿನ್ನವಾಗಿ ಸಾಹಿತ್ಯ ಕೃಷಿಗೈದವರು. ಸಾಹಿತ್ಯದ ವಿವಿಧ ಮುಖಗಳಲ್ಲಿ ಜಾನಪದ ಸಂಪಾದನೆ ವಿಶಿಷ್ಟವಾದದ್ದು, ಎಲ್ಲ ಸಾಹಿತಿಗಳ ಬರವಣಿಗೆ ಕಾವ್ಯದಿಂದ ಪ್ರಾರಂಭವಾದರೆ, ಇವರದು ವಿಭಿನ್ನ ರೂಪದಲ್ಲಿದೆ. ಜಾನಪದ ಸಂಪಾದನೆಯಿಂದ ಪ್ರಾರಂಭಿಸಿ ವೈಚಾರಿಕತೆಯ ಚಿಂತನೆಯ ಕಡೆಗೆ ವಾಲುವುದು ಗಮನಾರ್ಹ ಸಂಗತಿ.

**ಹೊಸೂರರ ಸಾಹಿತ್ಯ ವರ್ಗೀಕರಣ :**

**೧ : ಜಾನಪದೀಯ ನೆಲೆ :**

**ಅ : ಸಂಪಾದನೆ :**

೧. ಬೆರಸಿ ಇಟ್ಟೀನ ಬೆಲ್ಲ ನೆನೆಗೆಡಲಿ

೨. ಹೆಸರ ಹೇಳ್ತಿನಿ ಒಡಪಕಟ್ಟಿ

೩. ಶಿವಶರಣರ ಕ್ರಾಂತಿಕಾರಿ ಮೌಲಿಕ ವಚನಗಳು

೪. ದತ್ತಗೌರವ

೫. ಶಂಕರಾಭಿನಂದನ

೬. ಸ್ನೇಹ ಸಂಪದ

**ಬ : ವಿಮರ್ಶೆ :**

೧ : ಅಂತಃಸತ್ತ್ವದ ಸಾಧಕ ಕನಕದಾಸ

೨ : ಡೊಳ್ಳಿನ ಹಾಡುಗಳ ಸಮೀಕ್ಷೆ

೩ : ಜಾನಪದ ಉಪಾಸನೆ

**ಕ : ಸಂಶೋಧನೆ :**

೧ : ಜಾತಿಗಾರರ ಜಾತಕ

೨ : ಕನಕದಾಸರ ಜೀವನ ವಿಚಾರ

೩ : ಜಾನಪದ ಕುರಿತು

**೨ : ಸಾಂಸ್ಕೃತಿಕ ನೆಲೆ :**

**ಅ : ವೈಚಾರಿಕ ನೆಲೆ :**

ಭ್ರಮೆಗಳ ಮೇಲೆ ಬೆಳಕು

**ಬ : ಸಾಂಸ್ಕೃತಿಕ ವ್ಯಕ್ತಿತ್ವದ ಅನಾವರಣ :**

೧: ಸತ್ಯಾನ್ವೇಷಕ ಡಾ. ಶಂಭಾ ಜೋಷಿ

೨ : ಸಾತ್ವಿಕ ಸಾಹಿತಿ ಡಾ. ಬೆಟಗೇರಿ ಕೃಷ್ಣಶರ್ಮ

೩ : ಬೀರಪ್ಪದೇವನ ಉಪಾಸಕರ ಮಾದರಿಗಳು

೪ : ಸೇವಾಭಾವದ ಹೋರಾಟಗಾರ

**ಕ : ಪತ್ರಿಕಾ ನೆಲೆ :**

೧ : ಕಾಲ

೨ : ಕಾಲಗತಿ

**ಡ : ಸಂಘಟನಾ ನೆಲೆ**

## ೧ : ಜಾನಪದೀಯ ನೆಲೆ :

### ಅ. ಸಂಪದಾನೆ :

ಜನಪದಸಾಹಿತ್ಯ ಎಂದರೆ ಜನರ ಬಾಯಿಂದ ಬಾಯಿಗೆ ಹರಿದು ಬಂದಿರುವ ಸಾಹಿತ್ಯವಾಹಿನಿ ಹಿಂದೆ ಕೇವಲ ಮೌಖಿಕ ಸಾಹಿತ್ಯವಾಗಿದ್ದು ಈಗ ಲಿಖಿತ ಸಾಹಿತ್ಯವಾಗಿ ಹೊರಹೊಮ್ಮಿದೆ. Folk ಎಂದರೆ ಜನಪದ lore ಎಂದರೆ ಸಂಗ್ರಹ Folklore ಎಂದರೆ ಜನಪದ ಸಂಗ್ರಹ ಹಿಂದಿಯಲ್ಲಿ 'ಲೋಕ ವಿಜ್ಞಾನ' ಎಂದು ನಾವು ಕಾಣುತ್ತೇವೆ. ಕನ್ನಡ ಮೊದಲ ಕಾವ್ಯ ಕವಿರಾಜಮಾರ್ಗ ಲಾಕ್ಷಣ ಗ್ರಂಥದಲ್ಲಿ ಚತ್ತಾಣ, ಬೆದಂಡೆಗಬ್ಬಗಳನ್ನು ನೋಡಿದರೆ ಜನಪದದ ಕುರುಹುಗಳೆನ್ನಬಹುದಾಗಿದೆ. ಪಂಡಿತರಲ್ಲದವರು ಕಾವ್ಯ ಕಟ್ಟಿ ಹಾಡಬಲ್ಲರೆಂದು ನಾವು ನೋಡಬಹುದಾಗಿದೆ.

> "ಪದನರಿದು ನುಡಿಯಲುಂ ನುಡಿ
> ದುದನರಿದಾರಯಲು ಮಾರ್ಪರಾನಾಡವರ್ಗಳ್
> ಚದುರರ್ ನಿಜದಿಂ ಕುರಿತೋ
> ದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್"[೧]

ಕವಿರಾಜ ಮಾರ್ಗಕಾರನ ಪೂರ್ವದಲ್ಲಿ ಜನಪದೀಯರಿದ್ದರು. ವಿವೇಕ ವಿಚಾರಶೀಲರಾಗಿ ತಮ್ಮದೇ ಸೊಲ್ಲುಗಳಲ್ಲಿ ಹಾಡಿ ಕುಣಿಯುವ ಕಾಲದಲ್ಲಿ ಮಾರ್ಗಕಾರ ಹೀಗೆ ಹೇಳಿದ್ದಾನೆ. 'ಕುರಿತೋದದೆ' ಎಂಬ ಮಾತು ಜನಪದ ಕವಿಗಳ್ ನಿರಕ್ಷರತೆಯನ್ನು ಮಾತ್ರ ಹೇಳುತ್ತದೆ. ಆದರೆ ಅಭ್ಯಾಸ ಬಲಕ್ಕೆ ಅಕ್ಷರಜ್ಞಾನ ಅನಿವಾರ್ಯವಾಗಿರದೆ, ಅನುಕೂಲ ಮಾತ್ರವಾಗಿದೆ. ಪ್ರತಿಭೆ ಇದ್ದರೆ ಸಾಕು ಜೀವನದ ಅನುಭವ ಕಾವ್ಯಕ್ಕೆ ವಸ್ತುವನ್ನು

ಒದಗಿಸಬಲ್ಲದು.

ಕವಿರಾಜಮಾರ್ಗಕಾರನ ಪೂರ್ವದಲ್ಲಿ ಜನಪದ ಮೊಟ್ಟಮೊದಲು ಕೃತಿ 'ಗಜಾಷ್ಟಕ', ಅದು ಲಭ್ಯವಾಗಿಲ್ಲ, ನಂತರದಲ್ಲಿ ೭ನೇ ಶತಮಾನದಲ್ಲಿ ಬಾದಾಮಿಯ ಕಪ್ಪೆ ಅರಭಟ್ಟನ ಶಾಸನದಲ್ಲಿ ತ್ರಿಪದಿ ರೂಪದಲ್ಲಿ ನೋಡುತ್ತೇವೆ.

"ಸಾಧುಗೆ ಸಾಧು ಮಧುರ್ಯಂಗೆ ಮಾಧುರ್ಯಂ.
ಭಾದಿಪ್ಪ ಕಲಿಗೆ ಕಲಿ ಯುಗವಿಪರೀತನ್
ಮಾಧವನೀತನ್ ಪೆರನಲ್ಲ" ॥[೨]

ಕಪ್ಪೆ ಅರಭಟ್ಟನ ಶಾಸನದಲ್ಲಿ ತ್ರಿಪದಿಯ ಮೂಲಕ ಜಾನಪದ ಸಾಹಿತ್ಯದ ಇತಿಹಾಸವನ್ನು ನಾವು ಕಾಣಬಹುದು. ವಡ್ಡಾರಾಧನೆಯಲ್ಲಿ ಬರುವ ಜೈನ ಮುನಿಗಳು ಹೇಳುವ ಕಥೆಗಳೆಲ್ಲ ಜನಪದ ಅಂಶಗಳಿಂದ ಕೂಡಿವೆ. ಕನ್ನಡ ರತ್ನತ್ರಯರಾದ ಪಂಪ, ಪೊನ್ನ, ರನ್ನರ ಕಾವ್ಯಗಳಲ್ಲಿ ದೇಶಿ ನುಡಿಗಳ ಸೌಂದರ್ಯವು ಹೆಚ್ಚಿರುವುದನ್ನು ಕಾಣುತ್ತೇವೆ. ದುರ್ಗಸಿಂಹನ ಪಂಚತಂತ್ರ ಕಥೆಗಳು ಸಂಸ್ಕೃತವಾದರೂ ಇವುಗಳಲ್ಲಿಯೂ ಜನಪದ ಅಂಶ ಕಾಣುತ್ತೇವೆ. ೧೨ ನೇ ಶತಮಾನದಲ್ಲಿ ಕಂಡು ಬರುವ ವಚನಕಾರರು ಸಾಹಿತ್ಯದಲ್ಲಿ ಜನಪದೀಯ ಅಂಶಗಳಿವೆ. ಹರಿಹರ, ರಾಘವಾಂಕ, ಕುಮಾರವ್ಯಾಸ, ರತ್ನಾಕರವರ್ಣಿ, ದಾಸಸಾಹಿತ್ಯ, ಜೈನಸಾಹಿತ್ಯ, ಸರ್ವಜ್ಞನವಚನಗಳಲ್ಲಿ ಜನಪದ ಅಂಶ ಗೋಚರಿಸುತ್ತವೆ. ನವೋದಯ, ನವ್ಯ, ಪ್ರಗತಿಶೀಲ, ಬಂಡಾಯ, ದಲಿತ ಸಾಹಿತ್ಯಗಳಲ್ಲಿ ಜನಪದೀಯ ಅಂಶಗಳು ಹಾಸು ಹೊಕ್ಕಾಗಿವೆ.

ನಂತರದಲ್ಲಿ ಪಾಶ್ಚಾತ್ಯ ವಿದ್ವಾಂಸರು ಜಾನಪದ ಸಾಹಿತ್ಯಕ್ಕೆ ನೀಡಿದ ಕೊಡುಗೆ ಅಪಾರವಾದದದ್ದು, ವ್ಯಾಪಾರಕ್ಕಾಗಿ ಬಂದ ಈ ಅಧಿಕಾರಿಗಳು ಕನ್ನಡ ಸಾಹಿತ್ಯ ಕೃಷಿಗೈದು ತಮ್ಮದೇ ಭಾಷೆ, ಧರ್ಮಪ್ರಚಾರಕ್ಕೆ ಸಹಾಯವಾಗಲೆಂದು ಕನ್ನಡ ಸಾಹಿತ್ಯದಲ್ಲಿ ಅಪಾರ ಅನುಭವ ಪಡೆದಿದ್ದಾರೆ. 'ಫ್ಲೀಟ್' ಉತ್ತರ ಕರ್ನಾಟಕದ ಲಾವಣಿಗಳನ್ನು ೧೮೮೫ ರಿಂದ ೧೮೯೦ ರ ಹೊತ್ತಿಗೆ ಸಂಗ್ರಹಿಸಿದ್ದಾರೆ. ನಂತರದಲ್ಲಿ 'ಫರ್ಡಿನಾಂಡ್ ಕಿಟೆಲ್' ಕನ್ನಡ ಇಂಗ್ಲೀಷ ನಿಘಂಟು, ಸುಮಾರು ೪೧೬೮ ಗಾದೆಗಳನ್ನು ಸಂಗ್ರಹಿಸಿದ್ದಾರೆ. ಹೀಗೆ ಪಾಶ್ಚಾತ್ಯ ವಿದ್ವಾಂಸರ ಕೊಡುಗೆ ಶ್ಲಾಘನೀಯವಾಗಿದ್ದು.

"ಇಪ್ಪತ್ತನೆಯ ಶತಮಾನದ ಮೊದಲ ದಶಕದಲ್ಲಿ ಉತ್ತರ ಕರ್ನಾಟಕದಲ್ಲಿ ಲಾವಣಿಗಳ ಸ್ಪರ್ಧೆ ಅಲ್ಲಲ್ಲಿ ನಡೆದುದು ಗಮನಾರ್ಹಸಂಗತಿಯೇ ಸರಿ. ಬೆಳಗಾವಿ ಜಿಲ್ಲೆಯ ರಾಯಬಾಗ ತಾಲೂಕಿನ ಚಿಂಚಲಿ ಗ್ರಾಮದಲ್ಲಿ ಮಾಯಕ್ಕದೇವಿಯ ಜಾತ್ರೆಯಲ್ಲಿ ಪ್ರತಿವರ್ಷ ಲಾವಣಿಗಳ ಸ್ಪರ್ಧೆ ನಡೆಯುತ್ತಿರುವುದು ಅನೇಕ ಕಡೆಗಳಲ್ಲಿ ತಿಳಿದು ಬಂದಿದೆ. ಅಲ್ಲಿ ಕವಿ ಬಾಳಗೋಪಾಳನ ಲಾವಣಿಗಳನ್ನು ಹಾಡುವವರದೇ ಮೇಲುಗೈಯಾಗಿತ್ತು"[೩].

ಬಾಳಗೋಪಾಳನು ಬದುಕಿದ್ದು ಕ್ರಿ.ಶ. ೧೮೩೦-೧೯೧೦ ಇವರ ಲಾವಣಿಗಳನ್ನು ಸಂ. ಡಾ ನಿಂಗಣ್ಣ ಸಣ್ಣಕ್ಕಿ ಕನ್ನಡದ ಲಾವಣಿಗಳನ್ನು ಹಾಡುಗಳ ಮಟ್ಟದಿಂದ ಡಾ

ಬೆಟಗೇರಿ ಕೃಷ್ಣ ಶರ್ಮ ಮತ್ತು ಡಾ ಎಂ.ಎಸ್. ಸುಂಕಾಪೂರ ಅವರುಗಳು ಬೇರೆ ಬೇರೆಸಂದರ್ಭಗಳಲ್ಲಿ ಕೆಳಗಿನಂತೆ ವಿಭಾಗ ಹಾಗೂ ಕ್ರಮಗಳನ್ನು ಒಪ್ಪಿದ್ದಾರೆ. "ಬಾಳಗೋಪಾಳನ ಲಾವಣಿಗಳ ವಿಭಾಗಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

೧ : ಶೃಂಗಾರ ಲಾವಣಿಗಳು

೨ : ವೀರ ಲಾವಣಿಗಳು

೩ : ಕಥಾನಕ ಲಾವಣಿಗಳು

೪ : ತತ್ವ-ಗೀತ ಲಾವಣಿಗಳು

೫ : ಸಂವಾದ ಲಾವಣಿಗಳು."[೪]

ಆಧುನಿಕವಾಗಿ ಹೊಸ ಲಾವಣಿಗಳೆಂದು ಹೆಸರುಗಳಿಸಿರುವ ರಾಜಕೀಯ ಲಾವಣಿಗಳು, ಗೀಗೀ ಮಾಧ್ಯಮದಲ್ಲಿ ಸೇರಿ ಹೋಗಿರುವುದರಿಂದ ಲಾವಣಿಯ ಮೈಕಟ್ಟನ್ನು ಇವು ಪಡೆದಿಲ್ಲ ಎಂದಿದ್ದಾರೆ. ಸಾಹಿತ್ಯಕ್ಕೆ ರಾಯಬಾಗ ತಾಲೂಕಿನ ರಾಜಾದಿತ್ಯ, ಅಲಬೇರಿ, ಬಾಳಗೋಪಾಳ, ಹೊಸೂರರ ನಂತರದಲ್ಲಿ ಡಾ ವ್ಹಿ.ಎಸ್. ಮಾಳಿಯವರು ರಾಯಬಾಗ ತಾಲೂಕಿನಲ್ಲಿ ಸಾಹಿತ್ಯಕ್ಕೆ ನೀಡಿದ ಅಪಾರ ಕೊಡುಗೆ ಎಂದು ಹೇಳಬಹುದಾಗಿದೆ.

ಪಾಶ್ಚಾತ್ಯ ವಿದ್ವಾಂಸರಾದ, 'ಫ್ಲೀಟ್','ಗೋವರ್','ಮೋಗ್ಲಿಂಗ್', 'ಕಿಟಲ್' ಇವರು ಮಾಡಿದ ಸಂಗ್ರಹ, ಟಿಪ್ಪಣಿ, ಪ್ರಸ್ತಾವನೆಗಳನ್ನು ಬರೆದರು. ಇವೇ ಕನ್ನಡ ಜನಪದ ಸಾಹಿತ್ಯ ಕುರಿತು ಬರೆದ ಮೊದಲ ವಿಮರ್ಶೆಗಳಾದವು ಕನ್ನಡ ಜನಪದ ಸಾಹಿತ್ಯ ಕುರಿತು ಇಂಗ್ಲೀಷ ಭಾಷೆಯಲ್ಲಿ ಬಂದ ವಿಮರ್ಶೆಗಳಾಗಿವುದು ಇನ್ನೊಂದು ವಿಶೇಷವಾಗಿದೆ.

೧೮೯೪ ರಲ್ಲಿ ಬೆಳಗಾವಿ ಶ್ರೀ ಹಣಮಂತ ಗೋವಿಂದ ಜೋಶಿಯವರು 'ಸಾಮತಿ ಸಂಗ್ರಹ' ಎಂಬ ಗಾದೆಗಳ ಸಂಕಲನ ಪ್ರಕಟಿಸುವ ಮೂಲಕ ಈ ಸಂಪಾದನಾ ಕಾರ್ಯ ಕನ್ನಡದವರಿಂದ ಆರಂಭವಾಯಿತು. ಜನಪದ ಸಾಹಿತ್ಯ ವಿಮರ್ಶೆಯ ಕೃಷಿ ಸಾಗಿ ಬಂದಿರುವ ಕಾಲಾವಧಿಯನ್ನು ಹೊಸೂರರು ತಮ್ಮ ಜಾನಪದ ಉಪಾಸನೆ ಕೃತಿಯಲ್ಲಿ ಅಭ್ಯಾಸದ ಅನುಕೂಲತೆಗಾಗಿ ಮೂರು ಭಾಗಗಳನ್ನಾಗಿ ವಿಂಗಡಿಸಿದ್ದಾರೆ.

"೧ ಆರಂಭಕಾಲ - (೧೯೨೦-೧೯೫೦) ಪ್ರತಿಪಾದನೆ

೨ ನಡುಗಾಲ - (೧೯೫೧-೧೯೬೫) ಪ್ರಶಂಸೆ

೩ ಹೊಸಕಾಲ - (೧೯೬೬-೧೯೭೩) ಚಿಕಿತ್ಸಕತೆ"[೫]

ಹೊಸೂರರು ಈ ಮೂರು ಘಟ್ಟಗಳನ್ನು ಜಾನಪದ ಸಾಹಿತ್ಯ ವಿಮರ್ಶೆಯಲ್ಲಿ ಕೈಕೊಂಡ ಕ್ರಮ ಅತಿ ಉತ್ತಮ ಮತ್ತು ಗಮನಾರ್ಹ ಕೊಡುಗೆಯಾಗಿದೆ.

**ಬ. ವಿಮರ್ಶೆ :**

'ಸೃಜನಶೀಲ' ಮತ್ತು 'ಸೃಜನೇತರ' ಕನ್ನಡದಲ್ಲಿ ಕವನ ಸಣ್ಣಕಥೆ, ಕಾದಂಬರಿ, ಮುಂತಾದ ಪ್ರಕಾರಗಳನ್ನು 'ಸೃಜನಶೀಲ' ಎಂದೂ ; ವಿಮರ್ಶೆ, ವಿಶ್ಲೇಷಣೆ, ಸಂಶೋಧನೆ, ಚಿಂತನೆ ಮುಂತಾದವುಗಳನ್ನು 'ಸೃಜನೇತರ' ಎಂದೂ ಕರೆಯುವದು ವಾಡಿಕೆಯಾಗಿದೆ.

ಈ ವಾಡಿಕೆ ಹೇಗೆ ಬಂತು ಯಾರು ತಂದರು ಎಂದು ಇನ್ನು ತಿಳಿದಿಲ್ಲ. ಆದರೆ ಹಿಂದಿನ ಪ್ರಾಚೀನ ಸಾಹಿತ್ಯದಲ್ಲಿ ಈ ವಾಡಿಕೆ ಇಲ್ಲ. ಗದ್ಯ ಮತ್ತು ಕಾವ್ಯ ಎರಡು ಕೂಡಿಕೊಂಡು ರಚನೆಯಾಗಿರುವವದನ್ನು ಕಾಣುತ್ತೇವೆ. ಉದಾ : ಚಂಪೂಸಾಹಿತ್ಯ.

" 'ಸೃಜನಶೀಲ' ಪದವೇ ಹೇಳುವಂತೆ ಅದು ಸೃಜಿಸಬಲ್ಲ ಅಂದರೆ, ಹೊಸದಾಗಿ ಹುಟ್ಟಿಸಬಲ್ಲ ಒಂದು ಸಾಮರ್ಥ್ಯ. ಸಾಹಿತ್ಯದ ಮಟ್ಟಿಗೆ ಹೇಳುವುದಾದರೆ ಅದು ಅನುಭವ, ಭಾವನೆ ಮತ್ತು ಚಿಂತನೆಗಳನ್ನು ಪ್ರಕಟಿಸುವ ಜೀವಂತಿಕೆಗೆ ಸಂಬಂಧಿಸಿದ್ದು, ಅನುಭವಗಳನ್ನು ಒಂದು ಅರ್ಥಪೂರ್ಣ ಕ್ರಮದಲ್ಲಿ ಪುನರ್‌ನೆನೆಸುವ ಕಚ್ಚಾ ವಸ್ತುವಿಗೆ ಸಂಬಂಧಿಸಿದ್ದು. ಅದು ಕೃತಿಗಳನ್ನು ಹೊಸದಾಗಿ ಹೊಳೆಸಿಕೊಳ್ಳುವುದು ಮಾತ್ರವಲ್ಲ ಅದನ್ನು ಒಂದು ಕಲಾತ್ಮಕವಾಗಿ ಆ ಕಾಲದಲ್ಲಿ ಅಭಿವ್ಯಕ್ತಿ ಕೂಡಿ ಮಾಡುವಂತಹದ್ದು"[೬].

ವಿಮರ್ಶೆಯನ್ನು ಡಾ. ರಹಮತ್ ತರಿಕೆರೆಯವರು ಒಂದು ಹೊಸದಾಗಿ ಹುಟ್ಟಬಲ್ಲ ಮತ್ತು ಅನುಭವ ಭಾವನೆ ಚಿಂತನೆಗಳನ್ನು ಹುಟ್ಟಿಸುವ ಜೀವಂತಿಕೆಗೆ ಸಂಬಂಧಿಸಿದ ಅನುಭವಗಳನ್ನು ಅರ್ಥಪೂರ್ಣವಾಗಿ ನೋಡುವುದು ಮತ್ತು ಒಂದು ಕೃತಿಯನ್ನು ಸಂಪೂರ್ಣವಾಗಿ ಶೋಧಿಸುವುದು. ಮೌಲ್ಯ ಮಾಪನ ಮಾಡುವುದು, ತೂಗಿ ನೋಡುವುದು ಒಂದು ವಿಮರ್ಶೆ ಎನ್ನುವುದನ್ನು ಸ್ಪಷ್ಟಪಡಿಸುತ್ತಾರೆ.

ಕುವೆಂಪು ಅದರ 'ಕಲ್ಕಿ' ಪದ್ಯ ಹುಟ್ಟಿದು ಹೀಗೆ ಕವಿಯ ದೇವತೆಯ ಆಚರಣೆಯ ಕುಣಿತವೊಂದನ್ನು ಪ್ರತಿಯಾಗಿ ಇಟ್ಟುಕೊಂಡು ಅದರ ಕ್ರೌರ್ಯವನ್ನು ನಿರೂಪಿಸಬಹುದು. ಬೇಂದ್ರೆಯವರ 'ಕುರುಡಕಾಂಚಾಣ' ಕವಿತೆ ಹುಟ್ಟಿದ್ದು. ಹೀಗೆ ಸೃಜನಶೀಲತೆಯ ಹೊಸ ಕಾಣ್ಕೆಯ ಗುಣಗಳಾಗಿವೆ. ಡಾ. ಬೆಟಗೇರಿ ಕೃಷ್ಣ ಶರ್ಮರು ಜಾನಪದ ಸಾಹಿತ್ಯದಲ್ಲಿ ಉತ್ತರ ಕರ್ನಾಟಕದಲ್ಲಿ ಮೊಟ್ಟ ಮೊದಲು ಜಾನಪದ ತ್ರಿಪದಿಗಳನ್ನು ಸಂಗ್ರಹಿಸಿದವರು. ನಂತರದಲ್ಲಿ ಹಲಸಂಗಿ ಗಳೆಯರಾದ ಮಧುರ ಚೆನ್ನರು, 'ಗರತಿಯ ಹಾಡು' ಸಂಗ್ರಹವನ್ನು ಕಾಣುತ್ತೇವೆ. ಕಾಪಸೆ, ರೇವಪ್ಪನವರ 'ಮಲ್ಲಿಗೆ ದಂಡೆ' ಸಿಂಪಿಲಿಂಗಣ್ಣ ಅವರ 'ಜೀವನ ಸಂಗೀತ' ಲಾವಣಿ ಸಂಕಲನ ಹೊರ ತಂದಿದ್ದಾರೆ.

ಮಾಸ್ತಿಯವರ 'ಕನ್ನಡ ಲಾವಣಿ ಸಾಹಿತ್ಯ' ಮತ್ತು ಶ್ರೀ ಎಚ್.ಕೆ. ಮಲ್ಲಪ್ಪ ಅವರ 'ಕನ್ನಡ ಗಾದೆಗಳ ಜೀರ್ಣೋದ್ಧಾರ' ಶ್ರೀ ಪಿ. ಧೊಲಾಸಾಹೇಬರವರ 'ಲಾವಣಿಗಳ ಲಾವಣ್ಯ' ಡಾ. ಬೇಂದ್ರೆಯವರ 'ಜನಪದ ಸಾಹಿತ್ಯ' ಗೋರೂರ ಅವರ 'ಹಳ್ಳಿಯ ಹಾಡುಗಳು' ಶ್ರೀ ಅಚ್ಚಪ್ಪನ್ನವರ 'ಕನ್ನಡ ಗಾದೆಗಳು' ತೀ.ನಂ. ಶ್ರೀಕಂಠಯ್ಯಾನವರ 'ಸಮಾಲೋಕನ' ಚನ್ನವೀರ ಕಣವಿಯವರ 'ಜನಪದಗೀತೆಗಳಲ್ಲಿ ನಾಗರಪಂಚಮಿ', ಈಶ್ವರಚಂದ್ರ ಚಿಂತಾಮಣಿಯವರ 'ಗರತಿಯರಮನೆಯಿಂದ' ನಂತರದಲ್ಲಿ ಸಂಶೋಧನೆ ಕಾಲ ಪ್ರಾರಂಭವಾಯಿತು.

**ಸಂಶೋಧನೆ :**

ಸಾಹಿತ್ಯ ಸುಲಿದ ಬಾಳೆಯ ಹಣ್ಣಾದರೆ ಸಂಶೋಧನೆ ತೊಗಟೆ ಚಿಪ್ಪುಗಳಿಂದ

ಕೂಡಿದ ತೆಂಗಿನಕಾಯಿ, ಸಾಹಿತ್ಯ ಅನುಭವ ಪ್ರಧಾನವಾದರೆ ಸಂಶೋಧನೆ ಬುದ್ಧಿ ಪ್ರಧಾನ, ಬೌದ್ಧಿಕ ಕಾಳಜಿ, ತಾತ್ವಿಕ ಚಿಂತನೆಯ ಕಲ್ಪಕತೆಯ ಮೂಲಕ ವಾಸ್ತವಿಕತೆಯ ಮೂಸೆಯಲ್ಲಿ ಘಟನೆಗಳನ್ನುಂಟು ಮಾಡುವುದೇ ಸಂಶೋಧನೆಯೆಂದು ಹೇಳಿದ ಡಾ ಸವದತ್ತಿಮಠ ಅವರ ಅಭಿಪ್ರಾಯ ಸ್ವೀಕಾರಯೋಗ್ಯವಾದುದು. "ಸತ್ಯವನ್ನು ಶೋಧಿಸುತ್ತಾರೆಂಬುದೇ ಒಂದು ಭ್ರಮೆ, ಸಂಶೋಧನೆ ಎಂಬುದು ವಸ್ತುನಿಷ್ಠ ಮತ್ತು ವ್ಯಕ್ತಿ ನಿರುಪೇಕ್ಷವಾದ ಚಟುವಟಿಕೆಗಳಿಂದ ಕೂಡಿರುವುದರಿಂದ ಇನ್ನೊಂದು ಭ್ರಮೆ ಮೌಲ್ಯನಿರಪೇಕ್ಷಿ ಚಟುವಟಿಕೆಯಾದ್ದರಿಂದ ಅದು ಮತ್ತೊಂದು ಭ್ರಮೆ ಎನ್ನುತ್ತಾರೆ."[೬]

ಡಾ. ಕೆ.ವಿ. ನಾರಾಯಣರವರು ಸಂಶೋಧನೆಯಲ್ಲಿ ಸತ್ಯವಾಗಿರುವುದಿಲ್ಲ. ಅದಕ್ಕಾಗಿ ಮೂರು ಭ್ರಮೆಗಳ ಇರುವದರಿಂದ ಅಪ್ಪಟ ಸತ್ಯ ಯಾವುದೂ ಅಲ್ಲಾ. ಅದು ಕೇವಲ ಭ್ರಮೆ ಮಾತ್ರ ಅನುತ್ತಾರೆ. ಇದು ಸತ್ಯವೆನಿಸುತ್ತದೆ. ಏಕೆಂದರೆ ಕೆಲವೊಂದು ಸಲ ವೈಜ್ಞಾನಿಕವಾದ (ವಿಜ್ಞಾನ) ವೇ ಸುಳ್ಳಾಗುತ್ತದೆ. ಉದಾ : ಪ್ಲೇಟೊಗ್ರಹ ಅಲ್ಲಾ ಅನ್ನುವುದು. ಶೋಧನೆ ಮಾಡಿರುವುದು. ಎಲ್ಲ ಸತ್ಯವಾಗಿರುವದಿಲ್ಲಾ ಅನುವುದಕ್ಕೆ ಇದು ಒಳ್ಳೆಯ ಉದಾಹರಣೆಯಾಗಿದೆ.

ಡಾ. ಬಿ.ಎಸ್. ಗದ್ದಿಗಿಮಠರು. ಜಾನಪದ ಸಾಹಿತ್ಯ ಕ್ಷೇತ್ರದಲ್ಲಿ ಮೊಟ್ಟಮೊದಲಿಗೆ 'ಕನ್ನಡ ಜನಪದ ಗೀತೆಗಳು' ಎಂಬ ವಿಷಯದಲ್ಲಿ ಪಿ.ಎಚ್.ಡಿ. (೧೯೫೫ ರಲ್ಲಿ) ಪಡೆದವರಲ್ಲಿ ಮೊದಲಿಗರು. ಜಾನಪದ ಸಂಶೋಧನೆ ಕಾರ್ಯ ಕೈಗೊಂಡವರು ಇವರೇ ಮೊದಲಿಗರು. ಇವರ ಕಾಲದವರೆಗೂ ಜಾನಪದ ಸಂಗ್ರಹಣೆ ಎಲ್ಲವೂ ಸಂಶೋಧನೆಯಾಗಿತು. ಏಕೆಂದರೆ ಐತಿಹಾಸ ವಸ್ತುಗಳ ನಾಶವಾಗುವುದನ್ನು ತಡೆದು ಸಂಗ್ರಹಿಸಿದ್ದಾರೆ. ಇಲ್ಲದೇ ಹೋದರೆ ಮಾನವನ ಬಾಯಿಂದ ಬಾಯಿಗೆ ಬರುವ ಸಾಹಿತ್ಯ ನಶಿಸಿ ಹೋಗುತಿತ್ತು. ಈ ಕಾಲವನ್ನು ಜಾನಪದ ಸಾಹಿತ್ಯದ ಸುವರ್ಣಯುಗವೆಂದು ಕರೆಯಬಹುದು.

ಡಾ ಸರೋಜಿನಿ ಮಹಿಷಿಯವರು 'ಕರ್ನಾಟಕದ ಕವಯಿತ್ರಿಯರು' (೧೯೬೪) ಡಾ ಜಿ.ಎಸ್. ಶಿವರುದ್ರಪ್ಪನವರು 'ಸೌಂದರ್ಯ ಸಮೀಕ್ಷೆ' (೧೯೬೫) ಡಾ ಎಂ.ಎಸ್. ಸುಂಕಾಪೂರ ಅವರು ತಮ್ಮ 'ಕನ್ನಡ ಸಾಹಿತ್ಯದಲ್ಲಿ ಹಾಸ್ಯ' (೧೯೬೫) ಮತ್ತು ಡಾ ಚಂದ್ರಶೇಖರ ಕಂಬಾರ 'ಉತ್ತರ ಕರ್ನಾಟಕದ ಜಾನಪದ ರಂಗಭೂಮಿ' (೧೯೬೫) ಡಾ ಶಿವರಾಮ ಕಾರಂತರ 'ಜಾನಪದ ಗೀತೆಗಳು' (೧೯೬೫) ಡಾ ಶಂಭಾ ಜೋಶಿಯವರ 'ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ' ಡಾ ಹಾ.ಮಾ. ನಾಯಕರವರ 'ಜನಪದ ಸಾಹಿತ್ಯದ ಸ್ವರೂಪ' ಡಾ. ಎಂ.ಎಂ. ಕಲಬುರ್ಗಿ ಅವರ 'ಉತ್ತರ ಕರ್ನಾಟಕದ ಜನಪದ ಗದ್ಯ ಸಾಹಿತ್ಯ" ಮುಂತಾದ ಸಂಶೋಧಿತ ಕೃತಿಗಳು.

ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಕರಾವಳಿ ಪ್ರಾದೇಶಿಕತೆಯನ್ನು ವ್ಯಾಪ್ತಿಯಲ್ಲಿ

ಇಟ್ಟುಕೊಂಡು ಸಾಹಿತ್ಯ ಸಮೀಕ್ಷೆಗೆ ತಕ್ಕಂತೆ ವಿಭಾಗಿಸಲಾಗಿದೆ. ಈ ಮೂರು ಕ್ಷೇತ್ರದಲ್ಲಿ ಜಾನಪದ ಸಾಹಿತ್ಯಕ್ಕೆ ವಿಶಿಷ್ಟ ರೀತಿಯಲ್ಲಿ ಕೊಡುಗೆ ನೀಡಿದ ವಿದ್ವಾಂಸರನ್ನು ನಾವು ಮರೆಯುವಂತಿಲ್ಲ. ಡಾ. ಜಿ.ಶಂ.ಪರಮಶಿವಯ್ಯಾ ಡಾ. ದೆ. ಜವರೇಗೌಡ ಡಾ. ಆರ್.ಸಿ. ಹಿರೇಮಠ ಡಾ. ಫ.ಗು. ಹಳಕಟ್ಟಿ, ಲಕ್ಕಪ್ಪಗೌಡಾ, ಡಾ. ಬಸವರಾಜ ಮಲಶೆಟ್ಟಿ, ಡಾ. ಕ್ಯಾತನಹಳ್ಳಿ ರಾಮಣ್ಣನವರು, ಬಸವರಾಜ ನೆಲ್ಲಿಸರ, ಡಾ. ಹಕಾರಿ, ಡಾ. ಕುವೆಂಪು, ಡಾ. ಶ್ರೀರಾಮ ಇಟ್ಟನ್ನವರ, ಡಾ. ವಾಲಿ, ಡಾ. ಎನ್.ಆರ್. ನಾಯಕ, ಡಾ. ಎಚ್.ಎಲ್. ನಾಗೇಗೌಡ, ಡಾ. ಚಂದ್ರಶೇಖರ ಐತಾಳ, ಜ್ಯೋತಿ ಹೊಸೂರ, ಡಾ. ನಿಂಗಣ್ಣ ಸಣ್ಣಕ್ಕಿ, ಡಾ. ತಪಸ್ವಿಕುಮಾರ, ಡಾ. ಲಠ್ಠೆ, ಡಾ. ವ್ಹಿ.ಎಸ್. ಮಾಳಿ, ಡಾ. ಆರ್.ಬಿ. ಚಿಲಮಿ. ಹೀಗೆ ಅನೇಕ ವಿದ್ವಾಂಸರು ವಿಮರ್ಶೆ, ಸಂಶೋಧನೆಯನ್ನು ಕೈಕೊಂಡು ಜಾನಪದ ಸಾಹಿತ್ಯದ ಏಳ್ಗೆಗೆ ಪ್ರಮುಖ ಪಾತ್ರ ವಹಿಸಿದ್ದಾರೆ.

**೨ : ಸಾಂಸ್ಕೃತಿಕ ನೆಲೆ :**

**ಅ. ವೈಚಾರಿಕ ಚಿಂತನೆ :**

ಪ್ರಗತಿಶೀಲ ಮನೋಭಾವದ ವಿಕಾಸ ಮತ್ತು ಮುಕ್ತ ವೈಚಾರಿಕತೆಗೆ ಪ್ರಚೋದನೆ ಮೂಲಕ ಮಾನವ ಪ್ರಜ್ಞೆಯನ್ನು ಜಾಗೃತಗೊಳಿಸಬಲ್ಲ ಶಕ್ತಿಯನ್ನು ವೈಚಾರಿಕತೆ ಹೊಂದಿದೆ. ಈ ವೈಚಾರಿಕತೆ ಇತ್ತೀಚೆಗೆ ಕಾಣಿಸಿಕೊಂಡಿದ್ದು ಅಂದರೆ ಸುಮಾರು ೧೨ ನೇ ಶತಮಾನದಲ್ಲಿ ವೈಚಾರಿಕೆತೆಯನ್ನು ನಾವು ಕಾಣಬಹುದಾಗಿದೆ.

"ಆದಿಪುರಾಣ ಅಸುರಂಗೆ ಮಾರಿ
ವೇದಪುರಾಣ ಹೋತಿಂಗೆ ಮಾರಿ
ರಾಮ ಪುರಾಣ ರಕ್ಕಸರಿಗೆ ಮಾರಿ
ಭಾರತ ಪುರಾಣ ಗೋತ್ರಕ್ಕೆ ಮಾರಿ
ಎಲ್ಲ ಪುರಾಣ ಕರ್ಮಕ್ಕೆ ಮೊದಲು
ನಿಮ್ಮ ಪುರಾಣಕ್ಕೆ ಪ್ರತಿಯಲ್ಲಿ ಕೂಡಲ ಸಂಗಮದೇವಾ"[೮]

ಬಸವಣ್ಣನವರು ೧೨ ನೇ ಶತಮಾನದಲ್ಲಿ ಪುರಾಣಗಳ ಬಗ್ಗೆ ಆಕ್ರೋಶ ವ್ಯಕ್ತಪಡಿಸಿದ್ದನ್ನು ಕಾಣುತ್ತೇವೆ. ಸಾಮಾಜಿಕ ನ್ಯಾಯ, ಸಮಾನತೆ, ಇಲ್ಲದೇ ಇದ್ದರೆ ಈ ಪುರಾಣ ಯಾರಿಗೆ ಬೇಕು ? ಎಂದು ವೈಚಾರಿಕತೆಯನ್ನು ಎತ್ತಿ ತೋರಿಸುವುದು. ಕಾಣುತ್ತದೆ. ಜಾಗತಿಕ ಮಟ್ಟದ ಚಿಂತನಶೀಲರು, ಬುದ್ಧಿವಂತರು ವಿಚಾರಶೀಲರು ಪ್ರಜ್ಞಾವಂತರು, ಸತ್ತ್ವಶಾಲಿಯಾದ ಕ್ರಾಂತಿಕಾರಿ ವಚನಕಾರರು ಹೇಳಿದ ವಚನಗಳು ಬಹಳ ಸತ್ತ್ವಯುಕ್ತವಾದ, ಸಮಾಜ ಹಿತಕಾರಿ ಸೂಕ್ತ ಕೆಲಸ ಮಾಡುವಲ್ಲಿ ಮತ್ತು ಸಮಾಜಿಕ ಸಮಾನತೆ ಕಾಣಲು ಬಯಸಿ ವರ್ಗ, ವರ್ಣಗಳನ್ನು ವಚನಕಾರರು ಖಂಡಿಸಿದ್ದಾರೆ.

ಹಳೆಯಶಾಸ್ತ್ರ, ಭೂಸಲುಧರ್ಮ, ಕೇಡಿ ಜಗದ್ಗುರು, ಸ್ವಾರ್ಥಶೀಲ, ಆಚಾರ್ಯ

ಇದ್ದವರಲ್ಲಿ ಮುಲಾಜಿಲ್ಲದೇ ಧಿಕ್ಕರಿಸುವಂತಾಗಬೇಕು. ಲೋಕದ ಶಾಂತಿ ಸೌಖ್ಯಗಳಿಗೆ ಕಾರಣವಾಗುವ ಧರ್ಮವನ್ನು ವೈಚಾರಿಕತೆಯಿಂದ ಕಂಡುಕೊಂಡು ಮತಗಳನ್ನೆಲ್ಲಾ ಮತಿಯ ಓರೆಗಲ್ಲಿಗೆ ತಿಕ್ಕಬೇಕು.

"ಗುಡಿ ಚರ್ಚು ಮಶೀದಿಗಳ ಬಿಟ್ಟು ಹೊರಬನ್ನಿ
ಬಡತನದ ಬುಡಮುಟ್ಟ ಕೀಳ ಬನ್ನಿ !
ಮೌಢ್ಯತೆಯ ಮಾರಿಯನು ಹೊರದೊಚಲ್ಯೆತನ್ನಿ
ವಿಜ್ಞಾನ ದೀವಿಗೆಯ ಹಿಡಿಯ ಬನ್ನಿ
ಓ ಬನ್ನಿ ಸೋದರರೆ ಬೇಗ ಬನ್ನಿ"[೯]

ಕುವೆಂಪುರವರು 'ವಿಶ್ವಮಾನವ' ರಾಗಲು ನಾವು ಸಾಧಿಸಲೇಬೇಕಾದ ಮೂಲ ಭೂತ ಸ್ವರೂಪದ ತತ್ತ್ವ ಪ್ರಣಾಳಿಕೆ ವ್ಯಕ್ತಪಡಿಸಿದ್ದಾರೆ.

೧. ಮನುಷ್ಯ ಜಾತಿ ತಾನೊಂದೆ ವಲಂ' ಎಂಬುದನ್ನು ನಿರುಪಾಧಿಕವಾಗಿ ಸ್ವೀಕರಿಸಬೇಕು.
೨. ವರ್ಣಾಶ್ರಮವನ್ನು ತಿದ್ದುವುದಿಲ್ಲ. ಅದನ್ನು ಸಂಪೂರ್ಣವಾಗಿ ತೊಲಗಿಸಬೇಕು. ಆದರೆ ಬ್ರಾಹ್ಮಣ ಕ್ಷತ್ರೀಯ ವೈಶ್ಯ ಶಾಸ್ತ್ರ ಅಂತ್ಯಜ ಇತ್ಯಾದಿ ವಿಭಜನೆಯನ್ನು ನಿರ್ನಾಮ ಮಾಡಬೇಕು.
೩. ಜಾತಿ ಪದ್ಧತಿಯನ್ನು ಸಂಪೂರ್ಣವಾಗಿ ನಿರಾಕರಿಸಿ ವಿನಾಶಗೊಳಿಸಬೇಕು.
೪. 'ಮತ' 'ಮನುಜಮತ' ವಾಗಬೇಕು. ಪಥ ವಿಶ್ವ ಸಂಸ್ಥೆ ಪಥವಾಗಲೇಬೇಕು. ಮನುಷ್ಯ ವಿಶ್ವಮಾನವನಾಗಬೇಕು.
೫. 'ಮತ' ತೊಲಗಿ 'ಆಧ್ಯಾತ್ಮ' ಮಾತ್ರ ವೈಜ್ಞಾನಿಕ ತತ್ತ್ವವಾಗಿ ಮಾನ್ಯತೆ ಪಡೆಯಬೇಕು.

"ವಿಚಾರ ಸಾಹಿತ್ಯ – ಎಂಬುದು ಎಂದು ಉದಯಿಸುತ್ತದೆ ? ನಮಗೆ ಪರಿಚಿತವಾಗಿ ಬಂದಿರುವ ತಿಳಿವಳಿಕೆಯಲ್ಲಿ ಸಂಶಯ ಕಾಣಿಸತೊಡಗಿದಾಗ ನಾವು ಹಿರಿಯರಿಂದ ಕಲಿತ ಜ್ಞಾನಕ್ಕೂ ನಮ್ಮ ಸ್ವಂತ ಲಹರಿಗಳಿಗೂ ಹೊಂದಿಕೆ ಕಾಣಿಸಿದಾಗ ನಾವು ಕಲಿತ ಜ್ಞಾನದಲ್ಲೇ ಪರಸ್ಪರ ವೈಷಮ್ಯಗಳು ಕಾಣಿಸಿ ಅದೆ ಇದೇ–ಎಂಬ ಅಪನಂಬಿಕೆಗಳು ಮೂಡಿದಾಗ ವಿಚಾರ ಸಾಹಿತ್ಯದ ಸೃಷ್ಠಿಯಾಗುತ್ತದೆ".[೧೦]

ಡಾ ಶಿವರಾಮ ಕಾರಂತರು ವೈಚಾರಿಕ ಸಾಹಿತ್ಯದ ವಿಚಾರ ಹೇಗಿರಬೇಕು. ಎಂದು ಮೇಲಿನ ತಮ್ಮ ಮಾತುಗಳಿಂದ ಸ್ಪಷ್ಟವಾಗುತ್ತದೆ. ಮಾನವನ ಪ್ರಗತಿಗೆ ತೊಡಕಾಗಿರುವ ಮೌಢ್ಯಗಳನ್ನು ಹೊರಹಾಕಿ ವಿಚಾರಗಳನ್ನು ಚಿಂತನೆ, ವೈಜ್ಞಾನಿಕ ಸಿದ್ಧಾಂತಗಳ ಜೊತೆಗೆ ಯಾವುದೇ ಸಂಶಯ ತಾಳದೇ ಗಟ್ಟಿತನದಿಂದ ವೈಚಾರಿಕ ಸಾಹಿತ್ಯದ ಸ್ವರೂಪ ಅರಿಯಬಹುದಾಗಿದೆ.

ಈಗಿನ ಸಮಕಾಲಿನ ಸಾಹಿತ್ಯದಲ್ಲಿ ಕೇಳಿ ಬರುವ ಇನ್ನೊಂದು ಬಹುದೊಡ್ಡ ಹೆಸರು ಡಾ. ಚಂದ್ರಶೇಖ ಕಂಬಾರ ಅವರದು. ಗ್ರಾಮೀಣ ಹಿನ್ನೆಲೆ, ಜಾನಪದ, ಸತ್ವ ಮೈಳೈಸಿದಾಗ ಯಾವುದೇ ಬಗೆಯ ಸಾಹಿತ್ಯ ಶ್ರೀಮಂತವಾಗುತ್ತದೆ. ನಗರ ಭಾಷೆಗಿಲ್ಲದ ಸತ್ವ ಸೊಗಸು, ಧ್ವನಿ ಹಳ್ಳಿಯ ಭಾಷೆಗೆ ಇರುತ್ತದೆ. ಇಂಥ ಹಿನ್ನೆಲೆಯಲ್ಲಿರುವ ಕವಿ ಬರೆಹಗಾರರು ಚಂದ್ರಶೇಖರ ಕಂಬಾರರು. ಡಾ, ಸಿದ್ದಲಿಂಗಯ್ಯಾ, ಬರಗೂರ ರಾಮಚಂದ್ರಪ್ಪ, ಕಾಳೇಗೌಡ ನಾಗವಾರ, ಹೊಸೂರರು ಸಾಮಾಜಿಕ ಪ್ರಜ್ಞೆಯನ್ನು, ಸ್ಥಿತಿಗತಿಯನ್ನು ಗಮನದಲ್ಲಿಟ್ಟುಕೊಂಡು ಮತ್ತು ಡಾ. ಶಂಭಾ ಜೋಷಿ, ಡಾ, ಬೆಟಗೇರಿ ಕೃಷ್ಣಶರ್ಮರ ಮಾರ್ಗದರ್ಶನದಲ್ಲಿ ಹೊಸೂರರು ಮುಂತಾದ ಸಾಹಿತ್ಯಗಳ ಜೊತೆಯಲ್ಲಿ ಕಾಣಿಸಿಕೊಂಡಿರುವುದು ವೈಶಿಷ್ಟ್ಯ ಪೂರ್ಣವಾಗಿದೆ.

ಹೀಗೆ ಹೊಸೂರರು ಸಾಹಿತ್ಯದ ವಿಶಿಷ್ಠ ನೆಲೆಗಳನ್ನು ಕ್ರಿಯಾತ್ಮಕವಾಗಿ ಹೊಸ ಪ್ರಯೋಗಶೀಲತೆಯನ್ನು ಸಾಧಿಸಿ ಸಾಹಿತ್ಯದ ನೆಲೆಯಲ್ಲಿ ತಮ್ಮದೆಯಾದ ಛಾಪವನ್ನು ಮೂಡಿಸಿದ್ದಾರೆ. ಇಂಥ ಪರಂಪರೆಯಲ್ಲಿ ಸಾಹಿತ್ಯ ರಚಿಸಿದ ಅವರು ಸಂಶೋಧನಾತ್ಮಕ, ಸಂಪಾದನೆ, ವಿಮರ್ಶೆ, ಜನಾಂಗೀಕ, ವೈವಿದ್ಯತೆಯನ್ನು ಮುಂದಿನ ಅಧ್ಯಾಯದಲ್ಲಿ ಕಾಣಬಹುದಾಗಿದೆ.

**ಬ. ಅನಾವರಣ :**

ಒಂದು ಜನಾಂಗದ ಜೀವನ ವಿಧಾನವೇ ಸಂಸ್ಕೃತಿ ಎನಿಸಿಕೊಳ್ಳುತ್ತದೆ. ಜ್ಯೋತಿ ಹೊಸೂರ ಅವರು ಜೀವನ ಚರಿತ್ರೆಗಳನ್ನು ಕಟ್ಟಿಕೊಂಡಿದ್ದು ಸಾಂಸ್ಕೃತಿಕ ನೆಲೆಯಲ್ಲಿ ಬಹುಮುಖ್ಯವೆನಿಸುತ್ತದೆ. ಒಂದು ಜನಾಂಗ ಆಶಯ, ಸಮಕಾಲಿನ ಪರಿಸರ, ಆಯಾ ಕಾಲದ ವಿದ್ಯಮಾನಗಳು ಅದರಲ್ಲಿ ದಾಖಲುಗೊಂಡಿವೆ. ವ್ಯಕ್ತಿಯ ವಿಶಿಷ್ಟತೆಯ ಜೊತೆ ಜೊತೆಗೆ ಸಮಷ್ಟಿಯ ಚಿತ್ರಣ ಹೊಸೂರ ಅವರ ಬರವಣಿಗೆಯಲ್ಲಿ ಕಾಣುತ್ತೇವೆ. ಡಾ. ಶಂಬಾ ಜೋಷಿ ಕನ್ನಡ ನಾಡು ಕಂಡ ಧೀಮಂತ ಸಂಶೋಧಕ. ಅವರ ಸಂಶೋಧನೆ ನಾಡಿನ ಸಾಹಿತ್ಯ ಚರಿತ್ರೆಯಲ್ಲಿ ಮೈಲುಗಲ್ಲು. ಸಾಂಸ್ಕೃತಿಕವಾಗಿಯೂ ಅವರ ಬದುಕಿನ ಅಧ್ಯಯನ ಅವಶ್ಯಕವಾಗಿ ಆಗಬೇಕಾದ ಕಾರ್ಯವಾಗಿದೆ. ಅದನ್ನು ಜ್ಯೋತಿ ಹೊಸೂರ ಸಮರ್ಥವಾಗಿ ಪೂರೈಸಿದ್ದಾರೆ.

ಜಾನಪದ ಜನ ಜೀವನ ಜೀವಾಳವಾಗಿದೆ. ಕಳೆದ ಶತಮಾನದಲ್ಲಿ ಡಾ. ಬೆಟಗೇರಿ ಕೃಷ್ಣಶರ್ಮ ಅವರು ಮಾಡಿದ ಜಾನಪದ ಕಾರ್ಯ ಪ್ರಶಂಸನೀಯವಾಗಿದೆ. ಉತ್ತರ ಕರ್ನಾಟಕ ಜಾನಪದ ಬದುಕನ್ನು ಕಟ್ಟಿಕೊಟ್ಟ ಶ್ರೇಯಸ್ಸು ಬೆಟಗೇರಿಯವರದಾಗಿದೆ. ಅವರ ಜೀವನ ಸಾಹಿತ್ಯ ಸಾಧನೆ ಬಹಳ ಮಹತ್ವವಾದದ್ದು. ಹೀಗೆ ಸಂಶೋಧಕರಾಗಿ ಶಂಬಾ ಜಾನಪದ ವಿದ್ವಾಂಸರಾಗಿ ಬೆಟಗೇರಿ ಅವರ ಕೊಡುಗೆ ಅಪಾರವಾಗಿದೆ. ಇವರೆಡೂ ಸಾಂಸ್ಕೃತಿಕ ವ್ಯಕ್ತಿಗಳ ಜೀವನ ಚರಿತ್ರೆಯನ್ನು ಇವೆರಡೂ ಸಾಂಸ್ಕೃತಿಕ ವ್ಯಕ್ತಿಗಳ ಜೀವನ

ಚರಿತ್ರೆಯನ್ನು ಜ್ಯೋತಿ ಹೊಸೂರ ಮೌಲಿಕ ಚಿತ್ರಿಸಿದ್ದಾರೆ. ಸಾಂಸ್ಕೃತಿಕ ನೆಲೆಯಲ್ಲಿ ಈ ಅಂಶವನ್ನು ಅನಾವರಣಗೊಳಿಸಲಾಗಿದೆ.

**ಕ. ಪತ್ರಿಕಾ ನೆಲೆ :**

ದೇಶದ ಸಂವಿಧಾನ, ವ್ಯಕ್ತಿಯ ದೇಹಕ್ಕೆ ಹೃದಯವಿದ್ದಂತೆ ಸಂವಿಧಾನವು ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗ ಎಂಬ ಮೂರು ಅಂಗಗಳನ್ನು ಒಳಗೊಂಡಿದೆ. ಈ ಮೂರರ ಜೊತೆಗೆ ಪತ್ರಿಕಾರಂಗ ನಾಲ್ಕನೇಯ ಅಂಗವೆನಿಸಿಕೊಂಡಿದೆ. ಪ್ರಜಾಪ್ರಭುತ್ವದ ಊರುಗೋಲೆಂದರೆ 'ಪತ್ರಿಕೆ'ಯೊಂದು ಹೇಳುವ ಕಾಲವಿತ್ತು. ಪತ್ರಿಕೆಗಳು ಜನರ ಅಭಿರುಚಿಯನ್ನು ತಿದ್ದುತ್ತವೆ, ಬದಲಿಸುವೆ. ಭಾಷೆಯನ್ನು ರೂಪಿಸುತ್ತವೆ. ಸರಕಾರವನ್ನು ಬದಲಿಸುವ ಸಾಮರ್ಥ್ಯವು ಈ ಪತ್ರಿಕೆಗಳಿಗಿದೆ. ಇದಕ್ಕೆ ಈ ದೇಶದ ಇತಿಹಾಸವೆ ಸಾಕ್ಷಿಯಾಗಿದೆ.

ಜ್ಯೋತಿ ಹೊಸೂರ ಅವರು 'ಕಾಲ' ವೆಂಬ ಪತ್ರಿಕೆಯನ್ನು ಹುಟ್ಟು ಹಾಕಿದ್ದರು. ಅದು ಸಾಹಿತ್ಯಿಕ ಪತ್ರಿಕೆಯಾಗಿರುವುದು ವಿಶೇಷವಾಗಿದೆ. ಆರಂಭದಲ್ಲಿ ಕಾಲವನ್ನು ಮುಂದೆ 'ಕಾಲಗತಿ' ಯಾಗಿ ಪರಿವರ್ತಿಸಿದರು. ಕೆಲವು ಸಂಚಿಕೆಗಳನ್ನು ಹೊರತಂದರು. ಹೊಸೂರ ಸಂಪಾದಕತ್ವದ ಕಾಲ ಪತ್ರಿಕೆಯನ್ನು ಅಧ್ಯಯನಿಸುವುದು ಆ ಕಾಲದ ಸಾಹಿತ್ಯಿಕ ಅಧ್ಯಯನವಾಗಿದೆ. ಈ ಪ್ರಬಂಧದಲ್ಲಿ ಒಂದು ಪಕ್ಷಿ ನೋಟವನ್ನು ಕಟ್ಟಿ ಕೊಡಲಾಗಿದೆ.

**ಡ. ಸಂಘಟನೆ :**

ಸಂಘಟನೆಯೂ ಕೂಡ ಒಂದು ಕಲೆಯಾಗಿದೆ. ಎಲ್ಲಿರಗೂ ಅದು ಸಿದ್ದಿಸುವುದಿಲ್ಲ. ಸಂಘಟನಾಕಾರರಿಗೆ ವಿಶೇಷ ಅರ್ಹತೆಗಳಿರುತ್ತದೆ. ಜ್ಯೋತಿ ಹೊಸೂರ ಅವರು ರಾಯಬಾಗದಂತಹ ಹಿಂದುಳಿದ ಗಡಿಭಾಗದಲ್ಲಿ ಕನ್ನಡ, ಕರ್ನಾಟಕ, ಕನ್ನಡಿಗ ಎಂಬ ಅಂಶವನ್ನು ನಿರಂತವಾಗಿ ಕಾಯ್ದುಕೊಂಡವರು. ಕನ್ನಡಕ್ಕಾಗಿ ಕನ್ನಡ ಸಂಘ, 'ಕಾಲಗತಿ' ಪ್ರಕಾಶನ ಹುಟ್ಟುಹಾಕಿದರು. ಕವಿಗೋಷ್ಠಿ, ವಿಚಾರಸಂಕೀರ್ಣ, ಪುಸ್ತಕ ಬಿಡುಗಡೆ, ಮುಂತಾದ ಸಾಹಿತ್ಯಿಕ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಸಂಘಟಿಸುತ್ತಾ ಬಂದಿದ್ದಾರೆ. ರಾಯಬಾಗ ತಾಲೂಕಿನಲ್ಲಿ ಹತ್ತು ಹಲವು ಸಂಘಟನೆಗಳು ತಲೆಯೆತ್ತಲು, ಯಶಸ್ವಿಯಾಗಿ ಕಾರ್ಯ ನಿರ್ವಹಿಸಲು ಶ್ರೀಯುತರ ಪ್ರೇರಣೆ ಹಾಗೂ ಮಾರ್ಗದರ್ಶನ ಮುಖ್ಯವಾಗಿದೆ. ಪ್ರಾಚಾರ್ಯರಾಗಿ ಮಾಡಿದ ಸಂಘಟನೆ, ಆಢಳಿತಗಾರರಾಗಿ ಮಾಡಿದ ಸಂಘಟನಾ ಚಟುವಟಿಕೆಗಳು ಗಮನಾರ್ಹವಾಗಿವೆ. ವ್ಯಕ್ತಿತ್ವವನ್ನು ಪರಿಚಯಿಸುವ ಸಂಘಟನೆಯನ್ನು ಇದರಲ್ಲಿ ಚರ್ಚಿಸಲಾಗಿದೆ.

**ಕೊನೆಟಿಪ್ಪಣೆಗಳು :**

೧) **ಜಾನಪದ ಶಾಸ್ತ್ರ ಸಿದ್ಧಾಂತಗಳು.** ಪುಟ-೨೦೩. (ಸಂ.) ಡಾ. ವಿ. ದಂಡೆವೀರಣ್ಣ. ನೆಲೆಮನೆ ಪ್ರಕಾಶನ ಮಂಡ್ಯ. ೧೯೯೯.

೨) **ಕನ್ನಡ ಸಾಹಿತ್ಯ ಚರಿತ್ರೆ.** ಪುಟ-೪ ಡಾ. ರಂ.ಶ್ರೀ ಮುಗಳಿ. ಸಮಾಜ ಪುಸ್ತಕಾಲಯ ಧಾರವಾಡ. ೧೯೯೬.

೩) **ಜಾನಪದ ತರಂಗಗಳು.** ಪುಟ - ೬ ಡಾ. ನಿಂಗಣ್ಣ ಸಣ್ಣಕ್ಕಿ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. ೨೦೦೨.

೪) **ಅದೇ ಪುಟ** - ೭.

೫) **ಜನಪದ ಉಪಾಸನೆ.** ಪುಟ-೩ ಜ್ಯೋತಿ ಹೊಸೂರ. ಕಾಲಗತಿ ಪ್ರಕಾಶನ ರಾಯಬಾಗ. ೧೯೮೧.

೬) **ಕನ್ನಡ ಸಂಶೋಧನೆ ತಾತ್ವಿಕ ವಿಚಾರ.** : ಪುಟ-೨೫ ರಹಮತ್ ತರಕೇರಿ ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೭.

೭) **ಮಹಾಮಾರ್ಗ.** ಪುಟ-೨ (ಸಂ.) ಡಾ. ವೀರಣ್ಣ ರಾಜೂರ. ಸದಾನಂದ ಕನ್ನೋಳ್ಳಿ ಎಂ.ಎಂ. ಕಲಬುರ್ಗಿ ಅಭಿನಂದನಾ ಸಮಿತಿ. ೧೯೯೮.

೮) **ಶಿವಶರಣರ ಕ್ರಾಂತಿಕಾರಿ ಮೌಲಿಕ ವಚನಗಳು.** ಪುಟ : ೧೬ (ಸಂ.) ಜ್ಯೋತಿ ಹೊಸೂರ ಕಾಲಗತಿ ಪ್ರಕಾಶನ ರಾಯಬಾಗ. ೨೦೦೭.

೯) **ಜನತಾ ಪ್ರಜ್ಞೆ ಮತ್ತು ವೈಚಾರಿಕ ಜಾಗೃತಿ.** ಪುಟ-೫೩. (ಪ್ರ.ಸಂ.) ದೇ. ಜವರೇಗೌಡ ಕಾಲಗತಿ ಪ್ರಕಾಶನ ರಾಯಬಾಗ. ೧೯೭೮.

೧೦) **ವಿಚಾರ ಸಾಹಿತ್ಯ ನಿರ್ಮಾಣ.** ಮುನ್ನುಡಿ ಪುಟ-೧ ಡಾ. ಶಿವರಾಮ ಕಾರಂತ ಪ್ರಸಾರಂಗ ಕ.ವಿ.ವಿ. ಧಾರವಾಡ. ೧೯೬೮.

## ಅಧ್ಯಾಯ-೩

# ಜಾನಪದೀಯ ನೆಲೆ

### ೩.೧ : ಸಂಪಾದನೆ :

ಕನ್ನಡ ಸಾಹಿತ್ಯದಲ್ಲಿ ಗ್ರಂಥ ಸಂಪಾದನೆಗೆ ಪ್ರಮುಖ ಸ್ಥಾನವಿದೆ. ಶಾಸ್ತ್ರೀಯ ಚೌಕಟ್ಟಿದೆ. ಶಿಷ್ಟ ಸಾಹಿತ್ಯದ ಸಂಪಾದನೆಗೂ ಜಾನಪದ ಸಾಹಿತ್ಯದ ಸಂಪದಾನೆಗೂ ವ್ಯತ್ಯಾಸವಿದೆ. ಜ್ಯೋತಿ ಹೊಸೂರ ಅವರದು ಜಾನಪದ ಸಾಹಿತ್ಯದ ಸಂಪದಾನೆಯಾಗಿದೆ. ಇನ್ನೂ ಸಂಪದಾನೆಯ ಯಾವ ವಿಧಾನಗಳು ಬೆಳೆಯದ ಕಾಲದಲ್ಲಿ ಹೊಸೂರ ಅವರ ಜಾನಪದ ಸಂಪದಾನೆ ಮಾಡಿರುವುದು ಗಮನಾರ್ಹವಾಗಿದೆ. ಅದನ್ನಿಲ್ಲಿ ಚರ್ಚಿಸಲಾಗಿದೆ.

**'ಬೆರಸಿ ಇಟ್ಟೀನಬೆಲ್ಲ ನೆನೆಗಡಲಿ'**

ಜಾನಪದ ಒಂದು ರೀತಿಯಲ್ಲಿ 'ತೇರು' ಹೌದು. ಮತ್ತೊಂದು ರೀತಿಯಲ್ಲಿ 'ಗಣಿ' ಯೂ ಹೌದು. ಜಾನಪದ ಸಂಗ್ರಹ ಕಾರ್ಯ ಯಾವಾಗಲು ಮುಗಿಯದ ಕೆಲಸ ಇದು ಸತತ ಹರಿಯುವ ನೀರು ಇದ್ದ ಹಾಗೆ. 'ಮುಗಿದಾವ ನಮ್ಮ ಜೋಳ, ಉಳಿದಾವ ನಮ್ಮ ಹಾಡು' ಎಂದು ಹೇಳುತ್ತಾರೆ. ಸಂಗ್ರಹ, ಸಂಪಾದನೆ, ಸಂಶೋಧನೆ, ವಿಮರ್ಶೆ, ಅಧ್ಯಯನ ನಾವು ಎಷ್ಟು ಅಗೆದು-ತೆಗೆದರೂ ಸಂಶೋಧಕರಲ್ಲಿ ಕುತೂಹಲ, ಆಸಕ್ತಿ ಗರಿಗೆದರಿ ನಿಲ್ಲಿಸುವ ಕಾರ್ಯ ಜಾನಪದ ಸಾಹಿತ್ಯ ಮಾಡುತ್ತದೆ.

ಉತ್ತರ ಕರ್ನಾಟಕದಲ್ಲಿ ಮೊದಲನೇ ತಲೆಮಾರು ಕೆಲಸ ಮಾಡಿದ ಬೆಟಗೇರಿ ಕೃಷ್ಣಶರ್ಮರು, ಹಲಸಂಗಿಯ ಗೆಳೆಯರು. ಎರಡನೆಯ ತಲೆಮಾರಾಗಿ ಜ್ಯೋತಿ ಹೊಸೂರರು ಸಂಗ್ರಹಿಸಿದ ಜಾನಪದ ತ್ರಿಪದಿ- 'ಬೆರಸಿ ಇಟ್ಟೀನ ಬೆಲ್ಲನೆನೆಗಡಲಿ' ಮುಖ್ಯವಾಗಿದೆ. "ಜ್ಯೋತಿ ಹೊಸೂರ ಅವರು ಎಂ.ಎ. ಪ್ರಥಮ ವರ್ಷದ ವಿದ್ಯಾರ್ಥಿಯಾಗಿದ್ದಾಗಲೇ 'ಬೆರೆಸಿಇಟ್ಟೇನಬೆಲ್ಲನೆನೆಗಡಲಿ' ಜನಪದ ತ್ರಿಪದಿಯ ಸಂಗ್ರಹವನ್ನು ಸಂಪಾದಿಸಿ, ಪ್ರಕಟಿಸಿದ್ದು, ಒಂದು ಮೈಲುಗಲ್ಲಾಗಿದೆ. ಏಕೆಂದರೆ ೧೯೩೧ ರಲ್ಲಿ ಹಲಸಂಗಿ ಗೆಳೆಯರು ಹೊರತಂದ 'ಗರತಿಯಹಾಡು' ಸಂಗ್ರಹದ ನಂತರ ಅಷ್ಟೇ ತೂಕದ ಕೃತಿಯೆಂದು ಇದನ್ನು ಪರಿಗಣಿಸಲಾಗಿದೆ."[೧] ಎಂದು ಕೆ.ಎನ್. ದೊಡಮನಿಯವರು ಹಸಿರುಕ್ರಾಂತಿ ದಿನಪತ್ರಿಕೆಯಲ್ಲಿ ಹೇಳಿದ ಮಾತು ಗಮನಾರ್ಹವಾಗಿದೆ.

"ಇಷ್ಟಾದರೂ ಅಪಾರವಾದ ಜಾನಪದ ರಾಶಿಯ ಒಂದು ಮೂಲೆಯೂ ಮುಕ್ಕಾಗಿಲ್ಲ"[೨] ಎಂಬ ಹೊಸೂರರ ಮಾತು ಅಪ್ಪಟ ಸತ್ಯವಾಗಿದೆ. ಪಾಶ್ಚಾತ್ಯ ವಿದ್ವಾಂಸರು ಮತ್ತು ದೇಶಿ ವಿದ್ವಾಂಸರು ಅಗೆದು, ಶೋಧಿಸಿದರು. ಜಾನಪದ ಸಾಹಿತ್ಯದ ಶೋಧನೆಯ ಸಂಗ್ರಹ, ಸಂಪದಾನೆ ಯಾವ ಮೂಲೆಯಲ್ಲಿಯೂ ಮುಕ್ಕಾಗಿಲ್ಲದಿರುವುದು ಕಾಣುತ್ತದೆ.

"ಸಂಗ್ರಹ ಕಾರ್ಯವನ್ನು ಹೊಸೂರ ಅವರು ಅಚ್ಚುಕಟ್ಟಾಗಿ ಕ್ರಮಬದ್ಧವಾಗಿ

ಮಾಡಿರುವರು. ಒಂದು ವ್ಯಕ್ತಿಯ ಜೀವನದ ಪೂರ್ಣಚಿತ್ರವನ್ನು ಇಲ್ಲಿ ಹಂತ ಹಂತವಾಗಿ ಕಾಣಬಹುದಾಗಿದೆ. ಗೀತೆಗಳನ್ನು ಆಯ್ದುಕೊಳ್ಳುವಾಗ ಕಾವ್ಯದೃಷ್ಟಿ ಭಾಷೆಯ ವೈಶಿಷ್ಟ್ಯ, ಪ್ರಾದೇಶಿಕ ವೈವಿಧ್ಯ, ಇವುಗಳ ಕಡೆಗೆ ಗಮನವಿತ್ತು. ಈ ಸಂಗ್ರಹಕ್ಕೆ ಹೆಚ್ಚಿನ ಕಳೆ ತಂದು ಕೊಟ್ಟಿದ್ದಾರೆ. 'ಗರತಿಯಹಾಡು'ಗಳ ನಂತರ ೩೮ ವರ್ಷಗಳ ಮೇಲೆ ಅದೇ ಮಾದರಿಯ ಇನ್ನೊಂದು ಅಷ್ಟೇ ಎತ್ತರದ ಜನಪದ ಗೀತ ಸಂಗ್ರಹ ಪ್ರಕಟವಾಗುತ್ತಿರುವುದು ಗಮನಾರ್ಹ."[೩] ಎಂದಿರುವ ಕೃತಿಯ ಮಹತ್ತತೆಗೆ ಸಾಕ್ಷಿಯಾಗಿದೆ.

ಬೆಂಗಳೂರಿನಲ್ಲಿ ಜರುಗಿದ ೪೭ನೆಯ ಸಾಹಿತ್ಯ ಸಮ್ಮೇಳನದ ಸಾಹಿತ್ಯಗೋಷ್ಠಿಯಲ್ಲಿ ಪ್ರಬಂಧ ಮಂಡಿಸಿದ ಜಾನಪದ ವಿದ್ವಾಂಸ ಡಾ. ಜಿ.ಶಂ. ಪರಮಶಿವಯ್ಯನವರು "ಬೆಳಗಾವಿ ಜಿಲ್ಲೆಯ ರಾಯಬಾಗ ಪ್ರದೇಶದಲ್ಲಿ ಶ್ರೀ ಜ್ಯೋತಿ ಹೊಸೂರರು ಜನಪದ) ಸಂಗ್ರಹ ಕಾರ್ಯವನ್ನು ನಡೆಸಿದ್ದಾರೆ. ಕನ್ನಡ ಇತ್ತೀಚಿನ ಜನಪದ ಗೀತ ಸಂಗ್ರಹಗಳಲ್ಲಿ ಇವರ ಕೃತಿ ಅತ್ಯುತ್ತಮವಾದುದು. ಈ ಸಂಗ್ರಹ ಕಾರ್ಯವನ್ನು ಹೊಸೂರ ಅವರು ಅಚ್ಚುಕಟ್ಟಾಗಿ, ಕ್ರಮಬದ್ಧವಾಗಿ ಮಾಡಿರುವರು ಎಂಬ ಡಾ. ಆರ್.ಸಿ. ಹಿರೇಮಠರ ಮುನ್ನುಡಿಯ ಮಾತುಗಳಿಗೆ ನಾವು ದನಿಗೂಡಿಸಬಹುದಾಗಿದೆ."[೪] ಎಂದಿರುವುದು ಕೃತಿಯ ಶಿಸ್ತು, ಸತ್ತ್ವ ಹೆಚ್ಚಿರುವುದು ಕಾಣುತ್ತದೆ. ಜಾನಪದ ದಿಗ್ಗಜರಾದ ಡಾ. ಜಿ. ಶಂ. ಪರಮಶಿವಯ್ಯ ಹಾಗೂ ಕನ್ನಡ ಕಂಡ ಸುವಿಖ್ಯಾತ ಭಾಷಾ ವಿಜ್ಞಾನಿ ಡಾ. ಆರ್.ಸಿ. ಹಿರೇಮಠರವರು ಮೆಚ್ಚಿ ಪ್ರಶಂಸೆಯ ಮಾಡಿರುವುದು. ಕೃತಿಯ ಸತ್ವಕ್ಕೆ ಹಾಗೂ ಹೊಸೂರರ ಕಾರ್ಯಕ್ಕೆ ಸಂದ ಗೌರವವಾಗಿದೆ.

ಆರಂಭಿಕ ಸಂಗ್ರಹಕ್ಕೆ ದೊರೆತ ಸ್ವಾಗತ ಬೆರಗುಗೊಳಿಸುತ್ತದೆ. ಜ್ಯೋತಿ ಹೊಸೂರ ಅವರಿಂದ ರಚಿತಗೊಂಡಿರುವ ಕೃತಿಗಳು ಅವರ ವ್ಯಾಪಕವಾದ ಕ್ಷೇತ್ರ ಕಾರ್ಯ ಮತ್ತು ಆಳವಾದ ಅಧ್ಯಯನದ ಫಲಶೃತಿಯಾಗಿವೆ. ಹೊಸತನ್ನು ಉಸಿರಾಡುತ್ತವೆ. ಹೀಗಾಗಿ ಇವರ ಬೆರೆಸಿ ಇಟ್ಟೇನ ಬೆಲ್ಲ ನೆನೆಗಡಲಿ ತ್ರಿಪದಿಗಳ ಸಂಗ್ರಹ ಕರ್ನಾಟಕ ವಿಶ್ವವಿದ್ಯಾಲಯ ಬಿ.ಎ. ಭಾಗ ಒಂದು ತರಗತಿಗಳಿಗೆ ಪಠ್ಯ ಪುಸ್ತಕವಾಗಿ ಆಯ್ಕೆಗೊಂಡಿತ್ತು. ಲಲಿತ ಪ್ರಬಂಧ ರಚನೆಯಲ್ಲಿಯೂ ಪಳಗಿದ ಇವರು ಕೆಲವು ಲಲಿತ ಪ್ರಬಂಧಗಳನ್ನು ನೀಡಿದ್ದಾರೆ. ಇವರ 'ಬಾರದಿದ್ದ ಮಳೆ ಬಂದಾಗ' ಎಂಬ ಪ್ರಬಂಧವು ಎಂಟನೆಯ ತರಗತಿಯ ಕನ್ನಡ ಪಠ್ಯಪುಸ್ತಕದಲ್ಲಿ ಆಯ್ಕೆಗೊಂಡು ಇಂದಿಗೂ ಅದನ್ನು ಓದಿದವರ ಸ್ಮೃತಿ ಪಟಲದ ಮೇಲೆ ಹಸಿರಾಗಿದೆ. ಜಾನಪದ ಕ್ಷೇತ್ರ ಕಾರ್ಯವನ್ನು ಎತ್ತಿ ಹೇಳುತ್ತದೆ. ಜೊತೆಗೆ ಅವರ ಲಲಿತ ಪ್ರಬಂಧದಲ್ಲಿ ಮಾಡಿದ ಕೃಷಿಯನ್ನು ಪರಿಚಯಿಸುತ್ತವೆ. 'ಬೆರೆಸಿ ಇಟ್ಟೇನ ಬೆಲ್ಲ ನೆನೆಗಡಲಿ' ಎಂಬುದು ಆ ಭಾಗದಲ್ಲಿ ಪ್ರಚಲಿತವಿರುವ ತ್ರಿಪದಿಗಳ ಸಂಗ್ರಹ ಜಾನಪದರ ನಿತ್ಯ ಬದುಕಿನ ವಿಶೇಷವಾಗಿ ಹೆಣ್ಣು ಮಕ್ಕಳ ನೋವು, ನಲಿವು, ಅಂತಃಕರಣಗಳೆಲ್ಲ ಇಲ್ಲಿಯ ತ್ರಿಪದಿಗಳಲ್ಲಿ ಪಡಿ ಮೂಡಿವೆ. 'ಗರತಿಯ ಹಾಡು' ಸಂಗ್ರಹಕ್ಕೆ ಹೋಲಿಕೆಯಾಗಿರುವ

ಈ ಕೃತಿಯ ತ್ರಿಪದಿಗಳು ಪುನರಾವರ್ತನೆಗಳಲ್ಲಿ ಇದರಿಂದ ಸಹಜವಾಗಿ ಹೊಸೂರ ಅವರ ಶ್ರಮದ ಕಲ್ಪನೆ ಬಂದಿತು".[೫] ಎಂಬ ಮಾತುಗಳು ಕೃತಿಯ ಮೌಲ್ಯವನ್ನೇ ನಿರ್ದೇಶಿಸುತ್ತವೆ. ಜನಪದ ಹೆಣ್ಣುಮಕ್ಕಳ ಹೃದಯದ ಪಡಿಗನ್ನಡಿಯಾಗಿಯು, ಮಮತೆಯ ಮಾಧುರ್ಯವು ಮೈವೆತ್ತಿದೆ. ಸ್ತ್ರೀ ಜೀವನದ ಸಾಮಾಜಿಕ ಬದುಕಿನ ಒಳಗನ್ನಡಿಯಾಗಿದೆ.

"ಜ್ಯೋತಿ ಹೊಸೂರರ ಸಂಗ್ರಹದಲ್ಲಿ ಅರ್ಥಪೂರ್ಣವಾದ ಅನೇಕ ತ್ರಿಪದಿಗಳಿವೆ ಉದಾಹರಣೆ.-

'ಹಚ್ಚಿ ಬಟ್ಟಿನ ಕೈಯ ಒತ್ತಿ ಹಿಡಿಯಲಿ ಬ್ಯಾಡ
ನೆತ್ತರಿಳಿದಾವ ಬಟ್ಟೀಗಿ । ನನ ರಾಯ
ಅತ್ತೆವ್ವ ಬೇದಾಳು ಕೈಯ ಬಿಡ.'

ಎನ್ನುವಲ್ಲಿ ಹಚ್ಚಿ ಹೊಯಿಸಿಕೊಂಡ ಸಮಯವನ್ನು ಗಂಡ ಹೆಂಡಿರ ಸರಸದ ಸಂದರ್ಭದಲ್ಲಿ ಹೆಂಡತಿಯ ದನಿಯ ಮೂಲಕ ಅತ್ತೆಯ ಬಗ್ಗೆ ಅವಳ ಹೆದರಿಕೆಯ ಮೂಲಕ ತನ್ನನೋವು ಗಂಡನ ಮೇಲಿನ ಪ್ರೀತಿ ಈ ಪ್ರಮುಖ ವಿವರಗಳೊಂದನ್ನು ಬಿಟ್ಟುಕೊಡದೆ ಮನಮುಟ್ಟಿಸುವ ರೀತಿ ಅದ್ಭುತವಾಗಿದೆ."[೬]

ತ್ರಿಪದಿ ಪ್ರಾರಂಭವಾದದ್ದು ಜಾನಪದ ಸಾಹಿತ್ಯದ ಮೂಲ, ಗರತಿಯ ಹಾಡು, ಶಾಸನ, ಹಂತಿಪದ, ಬಲೋರಿಹಾಡು, ತ್ರಿಪದಿಯು ಮಾನವ ಜೀವನಾನುಭವವನ್ನು ಔಚಿತ್ತಪೂರ್ಣವಾಗಿ ಸರಳ ಸುಂದರ ಶೈಲಿಯಲ್ಲಿ ಮನ ಮುಟ್ಟುವಂತೆ ಬಿಡಿಸಿ ಹೇಳುವುದೆ ತ್ರಿಪದಿಯ ಜೀವಾಳವಾಗಿದೆ. ತ್ರಿಪದಿ ಯಾರ ಸೊತ್ತು ಅಲ್ಲಾ ಜನಪದ ನಿಲುವು ಆಗಿವೆ. ಸ್ತ್ರೀಯರು ಪುರುಷರು ತಮ್ಮ ಅನುಕೂಲಕ್ಕೆ ತಕ್ಕ ಹಾಗೆ ಸಂಪ್ರದಾಯ ಸಮಾರಂಭ, ಪೂಜೆ, ಮದುವೆ, ಸಮಯದಲ್ಲಿ ಸೋಭಾನ, ಬಲೋರಿ, ಹಂತಿಹಾಡು, ಹಾಡುತ್ತಾರೆ. ಪೂರ್ವಜರ ಪುರಾತನದ ಜೀವನಾನುಭವವತೇ ಮೈದಾಳಿ ನಿಂತಿದೆ.

"ಮಾನವನ ವಿವಿಧ ಭಾವಗಳನ್ನು ಅವುಗಳ ಸೊಲ್ಲಿನಲ್ಲಿಯೇ ಹಿಡಿದಿಟ್ಟುದನ್ನು ಇಲ್ಲಿ ಕಾಣಬಹುದು. ಸಂಗ್ರಹಕಾರರು ತ್ರಿಪದಿಗಳ ಪುನರಾವೃತ್ತಿಯಾಗದಂತೆ ಶ್ರಮಿಸಿ ಸಾಪಲ್ಯ ಪಡೆದಿದ್ದಾರೆ. ಇಲ್ಲಿಯ ಒಂದೊಂದು ತ್ರಿಪದಿಯು ಸರಸ, ಭಾವಪೂರ್ಣ, ಅರ್ಥಗರ್ಭಿತ, ೧೯೩೧ ರಲ್ಲಿ ಪ್ರಕಟವಾದ 'ಗರತಿಯಹಾಡು' ಸಂಕಲನದ ನಂತರ ಬಂದ ಅದೇ ತೂಕದವೆನ್ನಿಸಬಹುದಾದ ಗ್ರಂಥವಿದು ಎಂದು ಹೇಳುವಲ್ಲಿ ಅತ್ಯುಕ್ತಿಯಿಲ್ಲ."[೭] ಎಂಬ ಮಾತು ಗಮನಾರ್ಹವಾಗಿದೆ.

"ಹೊಸೂರರು ಈಗ ನೀಡಿರುವ ಈ ಸಂಗ್ರಹ ಚಿಕ್ಕದೆಂದು ತೋರಿದರೂ ತುಂಬ ಸಾರವತ್ತಾಗಿದೆ. ದೇವರ ಸ್ತುತಿ, ಅಕ್ಕರೆಯಬಳಗ, ಸತಿಪತಿ, ನಲ್ಲ-ನಲ್ಲೆಯರ ಸರಸ ಸಲ್ಲಾಪ, ಜೀವನದ ಸುಖ-ದುಃಖಗಳು, ವಕ್ರೋಕ್ತಿಗಳು ಮುಂತಾಗಿ ನಾನಾರೀತಿಯ ಭಾವನೆಗಳನ್ನು ಬಹು ಸುಂದರವಾಗಿ ವ್ಯಕ್ತಪಡಿಸುವ ತ್ರಿಪದಿಗಳನ್ನು ಇಲ್ಲಿ ಸಂಗ್ರಹಿಸಿ

ಕೊಟ್ಟಿದ್ದಾರೆ. ಹೊಸೂರ ಅವರು ಜೀವನವನ್ನು ನಾನಾ ದೃಷ್ಟಿಕೋನಗಳಿಂದ ಬಿಂಬಿಸುವ ತ್ರಿಪದಿಗಳನ್ನು ಸಂಗ್ರಹಿಸಿ ನೀಡಿದ್ದಾರೆ. ಅವರ ಈ ಪ್ರಯತ್ನ ಮುಂದುವರಿಯಲಿ, ಇಂಥ ಅನೇಕ ಸಂಗ್ರಹಗಳನ್ನು ಅವರು ಕನ್ನಡನಾಡಿಗೆ ನೀಡಲಿ, ಎಂದು ಹಾರೈಸುತ್ತೇನೆ."[೮] ಎಂಬ ಪತ್ರಿಕೆಯ ಸಂಪದಾಕರ ಮಾತು ಗಮನಾರ್ಹವಾದದ್ದು.

ತ್ರಿಪದಿ ಸಂಕಲನವನ್ನು ಸಂಗ್ರಹಿಸಿದ ಹೊಸೂರರು ತಮ್ಮ ಕ್ಷೇತ್ರ ಕಾರ್ಯದ ಬಗ್ಗೆ, ಅನುಭವ ತಿಳಿಸದಿರುವುದು. ತ್ರಿಪದಿ ಹಾಡಿದವರ ಹೆಸರು ವಿಳಾಸವನ್ನು ತಮ್ಮ ಅರಿಕೆಯಲ್ಲಿಯಾಗಲಿ, ಅನುಬಂಧದಲ್ಲಿಯಾಗಲಿ ತಿಳಿಸದಿರುವುದು ವಿಶಿಷ್ಟ ಸಂಗತಿಯಾಗಿದೆ. ತಮ್ಮಗೆ ಸಹಕರಿಸಿದ ವಿದ್ಯಾರ್ಥಿಗಳನ್ನು ರಾಯಬಾಗ ತಾಲೂಕಿನ ಕೆಲವು ಊರುಗಳನ್ನು ನೆನೆದುಕೊಂಡಿದ್ದು ಸ್ಪಷ್ಟವಾಗಿದೆ.

"ಬದುಕಿನ ವಿವಿಧ ಮುಖಗಳಾದ-ದೈವಭಕ್ತಿ, ಬಳಗಪ್ರೇಮ, ದಾಂಪತ್ಯ ಶೃಂಗಾರ, ಕಷ್ಟನಷ್ಟ, ಮುಂತಾದ ಸಂಕೀರ್ಣ ಭಾವಗಳನ್ನು ಅಭಿವ್ಯಕ್ತ ಮಾಡುವ ಈ ಹಾಡುಗಳನ್ನು ಒಂದು ವ್ಯವಸ್ಥೆಯಲ್ಲಿ ಅವುಗಳ ಸೊಲ್ಲಿನಲ್ಲಿಯೇ ಹೆಸರಿಟ್ಟು ವಿಭಾಗಿಸಿದ್ದೇನೆ. ಸಾಧ್ಯವಿದ್ದಷ್ಟೂ ಹಾಡುಗಾರರ ಸೊಲ್ಲನ್ನು ಬರಹದಲ್ಲಿ ಹಿಡಿದಿಡಲು ಪ್ರಯತ್ನಿಸಿದ್ದೇನೆ. ಇದರಿಂದ ಇನ್ನೊಂದು ಪ್ರದೇಶದವರಿಗೆ ಅರ್ಥಗ್ರಹಿಸಲು ತೊಂದರೆಯಾಗುವುದೆಂಬ ಪ್ರಜ್ಞೆನನಗಿದ್ದರೂ ಹಾಡುಗಾರರ ಸೊಲ್ಲನ್ನು ಮಾರ್ಪಡಿಸುವ ಹಕ್ಕು ನನಗಿಲ್ಲವೆಂದು ಭಾವಿಸಿದ್ದೇನೆ."[೯] ಈ ಮಾತುಗಳು ಸಂಪಾದಕರ ಪ್ರಾಮಾಣಿಕತೆಯನ್ನು ತಿಳಿಸುತ್ತದೆ. ನನ್ನ ಕೈಗೆ ಸಿಲುಕಿದರಲ್ಲಿಯ ಹಲವು ಹಾಡುಗಳನ್ನು ಆಯ್ದು. ಇಲ್ಲಿಯುವರೆಗಿನ ಸಂಗ್ರಹದಲ್ಲಿಯು ಹಾಡುಗಳು ಪುನರಾವರ್ತಿತಯಾಗದಂತೆ ಯತ್ನಿಸಿ, 'ಬೆರೆಸಿ ಇಟ್ಟೇನ ಬೆಲ್ಲ ನೆನೆಗಡಲಿ' ಎಂಬ ಅರಿಕೆಯ ಮಾತುಗಳು ಗಮನಾರ್ಹವಾಗಿದೆ.

"ಆಧುನಿಕ ಜೀವನ ಶೈಲಿಯ ಸಂದರ್ಭದಲ್ಲಿ ಕುಟ್ಟುವುದು, ಬೀಸುವುದು, ಹತ್ತಿ ಬಿಡಿಸುವುದು ಹಂತಿ ಹೊಡೆಯುವುದು, ನಿಂತು ಬಿಟ್ಟಿದೆ. ಆ ಕಾರ್ಯವನ್ನು ಇಂದು ಯಂತ್ರಗಳು ಮಾಡುತ್ತಿವೆ. ಇದರಿಂದ ಜಾನಪದ ಸಾಹಿತ್ಯ ಹುಡಿಗೂಡಿ ಹೋಗುತ್ತಿದೆ. ಇದನ್ನು ಮನಗಂಡ ಜ್ಯೋತಿಯವರು ಇರುವಷ್ಟನ್ನಾದರೂ ಉಳಿಸೋಣ, ನಮ್ಮ ಸಂಸ್ಕೃತಿ ಪರಂಪರೆ ತಕ್ಕ ಮಟ್ಟಿಗಾದರೂ ಮುಂದಿನವರಿಗೆ ಗೊತ್ತಾಗಲಿ ಎನ್ನುವ ಸದುದ್ದೇಶದಿಂದ ಇತರರಂತೆ ತಾವೂ ಜಾನಪದವನ್ನು ಸಂಗ್ರಹಿಸುವ, ವ್ಯಾಖ್ಯಾನಿಸುವ, ಸಂಶೋಧಿಸುವ, ಅಭ್ಯಸಿಸುವ ಕಾರ್ಯದಲ್ಲಿ ತೊಡಗಿದುದು ನಿಜಕ್ಕೂ ಶ್ಲಾಘನೀಯವಾದದ್ದು."[೧೦] ಎಂದಿದ್ದಾರೆ. ಭಕ್ತಿನೆಲೆ, ಬಳಗದ ಸುಖದನೆಲೆ, ದಾಂಪತ್ಯದನೆಲೆ, ಶೃಂಗಾರನೆಲೆ, ಬದುಕಿನನೆಲೆ, ಕಷ್ಟನಷ್ಟಗಳ ನೆಲೆ, ಹೀಗೆ ಬದುಕಿನ ವಿಭಿನ್ನ ಮುಖಗಳನ್ನು ಈ ಜಾನಪದ ತ್ರಿಪದಿಯಲ್ಲಿ ಕಾಣುತ್ತೇವೆ. 'ಬೆರೆಸಿ ಇಟ್ಟೇನ ಬೆಲ್ಲ ನೆನೆಗಡಲೆ' ಈ ಕೃತಿಯಲ್ಲಿ ಹೊಸೂರರು ಏಳು ಭಾಗಗಳನ್ನಾಗಿ ವಿಂಗಡಿಸಿದ್ದಾರೆ.

೧. ಏಳುತಲೆ ನೆನದೀನ ಏಳೆಂಟು ದೇವರನ – ೫೬ ತ್ರಿಪದಿಗಳು

೨. ಸುತ್ತಿರುವ ಬಳಗ ಸುಖವಿರಲಿ – ೧೫೧ ತ್ರಿಪದಿಗಳು

೩. ಕಾಮಕಸ್ತೂರಿ ನಿನ್ನ ಕಾಣದೆ ಇರಲಾರೆ – ೫೭ ತ್ರಿಪದಿಗಳು

೪. ಹ್ಯಾಂಗೀಸಿ ಬರಲಿ ಜಗದಾಗ – ೩೨ ತ್ರಿಪದಿಗಳು

೫. ಹಾಕ್ಯಾಡತಾನ ಗಜನಿಂಬಿ – ೪೩ ತ್ರಿಪದಿಗಳು

೬. ಬಿಳಿಮುತ್ತನ್ಹಾಂಗ ಬಿಳಿಜ್ವಾಳ – ೪೪ ತ್ರಿಪದಿಗಳು

ಹೀಗೆ ಒಟ್ಟು ೩೮೩ ತ್ರಿಪದಿಗಳು ಈ ಕೃತಿಯಲ್ಲಿ ಕಾಣುತ್ತೇವೆ. 'ಗರತಿಯಹಾಡು' ಗಿಂತಲೂ ಈ ಕೃತಿ ವೈಶಿಷ್ಟ ಪೂರ್ಣವಾಗಿದೆ 'ಗರತಿಯ ಹಾಡು' ಕೃತಿಯಲ್ಲಿನ ಕೆಲವು ಪದ್ಯಗಳು ಈ ಕೃತಿಯಲ್ಲಿ ಪುನರಾವರ್ತಿತವಾಗಿವೆ. ಹೊಸ ತ್ರಿಪದಿ ಪ್ರಾದೇಶಿಕ ವೈಶಿಷ್ಟ್ಯದೊಂದಿಗೆ ದಾಖಲುಗೊಂಡಿವೆ. ಪದಗಳಟಿಪ್ಪಣೆ, ಅರ್ಥಗ್ರಹಿಕೆಗೆ ಅನುಕೂಲಕಾರಿಯಾಗಿದೆ. ಈ ಸಂಗ್ರಹದ ಕಾರ್ಯ ಬಹಳ ಅಚ್ಚುಕಟ್ಟಾಗಿ ಶಾಸ್ತ್ರೀಯವಾಗಿದೆ ಎನ್ನುವುದು ಸ್ಪಷ್ಟಪಡಿಸುತ್ತದೆ.

**ಹೆಸರ ಹೇಳ್ತಿನಿ ಒಡಪಕಟ್ಟಿ :**

ಜಾನಪದ ಸಾಹಿತ್ಯ ಹರಿಯುವ ಗಂಗೆಯಾಗಿದ್ದಾಳೆ ಜಾನಪದ, ಸಂಪಾದನೆ, ಸಂಗ್ರಹವು ನಾಡಿನ ಏಳಿಗೆ ಸಂಸ್ಕೃತಿಗೆ ಉತ್ತೇಜನ ನೀಡುವ ಸಾಹಿತ್ಯವಾಗಿದೆ. ಜ್ಯೋತಿಹೊಸೂರ ಅವರ ಎರಡನೇಯ ಕೃತಿ ರಾಯಬಾಗ ಜಾನಪದ ಮಂಟಪ ಪ್ರಕಾಶನದಿಂದ ೧೯೭೧ ರಲ್ಲಿ ಪ್ರಕಟವಾದ ಕೃತಿಯಾಗಿದೆ. ಇದು ಒಡಪು ಸಂಗ್ರಹ ಸಂಕಲನ. "ಒಡಪು ಜನಪದ ಗದ್ಯ ಸಾಹಿತ್ಯದ ಒಂದು ಅಂಗ. ಮದುವೆ ಶೋಭನ ಮೊದಲಾದ ಸಂಪ್ರದಾಯಿಕ ಸಂಸ್ಕಾರಗಳೊಂದಿಗೆ ಒಡಪುಗಳ ಸಂಬಂಧವಿವೆ".[೧೧] ಎಂದು ಅರಿಕೆಯಲ್ಲಿರುವ ಮಾತು ಓದುಗರಿಗೆ ಒಳ್ಳೆಯ ಪ್ರವೇಶ ಒದಗಿಸುತ್ತದೆ. ಈ ಕೃತಿ ೧೯೭೪ ರಲ್ಲಿ ಎರಡನೆಯ ಮುದ್ರಣದ ಸೌಭಾಗ್ಯ ಪಡೆದಿರುವುದು. ಅದರ ಜನಪ್ರಿಯತೆಗೆ ಸಾಕ್ಷಿಯಾಗಿದೆ.

ಸುದೀರ್ಘವಾದ ಪ್ರಸ್ತಾವನೆಯಿದ್ದು, ಪುಸ್ತಕ ಓದುವವರಿಗೆ ಸ್ಪಷ್ಟ ಚಿತ್ರಣವನ್ನು ಕಟ್ಟಿಕೊಳ್ಳಲು ನೆರವಾಗಿದೆ. ಹೆಣ್ಣುಮಕ್ಕಳ ಒಡಪು, ಗಂಡು ಮಕ್ಕಳ ಒಡಪು ಅರ್ಥಕೋಶ ಎಂದು ವಿಂಗಡಿಸಿಕೊಂಡಿದ್ದಾರೆ. ಮೊದಲು ಭಾಗ ಹೆಣ್ಣುಮಕ್ಕಳ ಒಡಪಿಗೆ ಮೀಸಲಾಗಿದೆ. ಇದರಲ್ಲಿ

೧. ಸುಲಗಾಯಿ ಮುಂದ ಸುಳದಾಡತಾನ

೨. ಆಡತಾನ ನೋಡತಾನ

೩. ಉಣ್ಣಾಂವ ಬಲಚೆದುರ

ಬಂಗಾರ ಬಾಗಲಾ ತೆರಿ

೪. ಹತ್ತ ಮಂದ್ಯಾಗ ಕುತ್ತ ಹೌಂದ ಅನಸ್ನೋತಾನ

೫. ಹಿಂತಾ ಗಂಡ ಸಿಗೂದ ಅಪರೂಪ

೬. ನಮ್ಮವಗ ನನಗ ಬಾಳಾವರಾ

೭. ಸಾಸಿವಿ ಬಣ್ಣದ ಸೀರಿ

೮. ಸವ್ವಾಸೇರ ಬಂಗಾರ

೯. ನನಗೆ ಗೊತ್ತ ನನ ಗಂಡನ ಗತ್ತ

೧೦. ಜಾಣೀನ ಕರ್‍ಕೊಂಡ ಜಲ್ಮಾ ಮಾಡೂದ ಬಿಟ್ಟಿ

೧೧. ಹೆಸರ ಕೇಳಾವರ ಹೆಣ್ಣಾಎತ್ತಲಿ

ಹೀಗೆ ಹನ್ನೊಂದು ತಲೆಬರಹದಲ್ಲಿ ಒಟ್ಟು ೧೨೧ ಒಡಪುಗಳನ್ನು ಸೆರೆಹಿಡಿದಿದ್ದಾರೆ. ಎರಡನೇ ಭಾಗದಲ್ಲಿ ಗಂಡು ಮಕ್ಕಳ ಒಡಪುಗಳಿವೆ.

೧. ನನ್ನ ಹ್ಯಾಣತಿ ಬಲೂ ಬೆರಕಿ

೨. ಮುತ್ತೋದಿ ನನ ಹ್ಯಾಣತಿ ಮನ್ಯಾಗ ಅದಾಳ

೩. ನಾ ಒಂದ ಹೇಳಣಾ ತಾ ಒಂದ ಮಾಡತಾಳ

೪. ಹೆಸರ ಕೇಳಕ್ಕಿನ ಹೆಡಮುರಗಿ ಕಟ್ಟಿ

ಹೀಗೆ ನಾಲ್ಕು ಭಾಗಗಳನ್ನಾಗಿ ವಿಂಗಡಿಸಿದ್ದಾರೆ. ಒಟ್ಟು ಎಪ್ಪತ್ತೆಂಟು ಒಡಪುಗಳನ್ನು ಸಂಕಲನಗೊಳಸಿದ್ದಾರೆ. ಮೂರನೆಯ ಭಾಗದಲ್ಲಿ ಅರ್ಥಕೋಶವಿದೆ. ಇದರಲ್ಲಿ ಟಿಪ್ಪಣೆ ಮತ್ತು ಶಬ್ದಕೋಶವೆಂಬ ಮತ್ತೆರಡು ವಿಭಾಗಗಳಿವೆ. ಶುದ್ದ ಶಾಸ್ತ್ರೀಯ ಹಾಗೂ ವೈಜ್ಞಾನಿಕ ಹಿನ್ನೆಲೆಯ, ಸಂಪಾದನೆ ಇದಾಗಿದೆ.

"ಹಳ್ಳಿಗರು ದಾಂಪತ್ಯ ಪ್ರೇಮವನ್ನು ಹೇಗೆ ಹೇಗೆ ಪ್ರಕಟಿಸಬಲ್ಲರೆಂಬುದಕ್ಕೆ ಈ ಒಡಪದ ಸಾಹಿತ್ಯ ಸುಂದರ ಪ್ರಮಾಣಗಳನ್ನು ಒದಗಿಸಿಕೊಂಡು ಬಲ್ಲದು. ಅದರಲ್ಲಿಯೂ ಹೆಣ್ಣುಮಕ್ಕಳು ಹೇಳುವ ಒಡಪಗಳಂತೂ ಮಾಧುರ್ಯದ ಮೋದಕಗಳಂತಿರುವುವು. ಮೊದಲಗಿತ್ತಿಯರು ಹೇಳುವ ಒಡಪಗಳು ಪತಿ ವಿಷಯಕ ಪ್ರೇಮ ಪವಾಡಗಳನ್ನು ನೇರವಾದ ನುಡಿಗಳಲ್ಲಿ ಹೇಳುತ್ತಿದ್ದರೆ ಪ್ರೌಢೆಯರು ಹೇಳುವ ಒಡಪುಗಳು ಪ್ರೀತಿ ಪ್ರದರ್ಶಕ ವಕ್ರೋಕ್ತಿಗಳಾಗಿರುವುವು".[೨] ಗಂಡ, ಹೆಂಡಿರ ಮದುವೆ ಸಮಾರಂಭಗಳಲ್ಲಿ ಹಳ್ಳಿಯ ಮುಗ್ದ ಜನರು ಅತಿ ಜಾಣತನದಿಂದ, ಜಾಣ್ಮೆಯಿಂದ ಒಗಟು, ಒಡಪುಗಳನ್ನು ಹೇಳುವುದು ಕೇಳುವುದು ಒಂದು ವಾಡಿಕೆಯಾಗಿದೆ. ಜನರ ಮನಸ್ಸಿನಲ್ಲಿ ಪ್ರೀತಿ, ಪ್ರಣಯ, ವಾತ್ಸಲ್ಯ, ಭಕ್ತಿ, ಸಿಟ್ಟು, ಸೇಡು, ಹೀಗೆ ಉದ್ಭವಿಸಿದಾಗಲು ಜನರು ವಕ್ರನುಡಿಯಾಗಿಯೋ, ಹಂಗಿಸುವ ನುಡಿಯಾಗಿಯೋ ನುಡಿಯುವ ಜನಪದ ಉತ್ಕೃಷ್ಟ ನೆಲೆಯಾಗಿ ಒಡಪು ನಿಂತಿದೆ.

ಪ್ರಸ್ತಾವನೆಯು ಸುಧೀರ್ಘವಾಗಿದೆ. ಇದರಲ್ಲಿ ಒಡಪು, ಹುಟ್ಟು, ಬೆಳವಣಿಗೆ,

ಪರಂಪರೆ ಪ್ರಸಾರ, ಹಬ್ಬ ಹುಣ್ಣಿವೆ, ಆಚರಣೆ, ಸಂಪ್ರದಾಯ, ಮದುವೆ ಮಂಗಲಕಾರ್ಯ ಬಳಸುವ ಪ್ರಸಂಗ ಇತ್ಯಾದಿಗಳನ್ನು ಚರ್ಚಿಸಿದ್ದಾರೆ. "ಒಗಟು ಇದು ಸಾಹಿತ್ಯದಲ್ಲಿ ಶಿಕ್ಷಿತ ವರ್ಗದಲ್ಲಿ ಪ್ರಚಲಿತಪದ ವಿವಿಧ ಪ್ರಸಂಗಗಳಲ್ಲಿ ಹೆಚ್ಚು ಬಳಕೆಗೊಳ್ಳುವ ಪದ, ಒಗಟು ಎಂಬುದು ಇದರ ಹಳಗನ್ನಡ ರೂಪ ಸಮಸ್ಯೆ, ಗೂಢವಾದ ಮಾತು ಎಂದು ಇದರ ಅರ್ಥ, ಇಂಗ್ಲೀಷಿನ Riddle ಮತ್ತು ಸಂಸ್ಕೃತದ 'ಪ್ರಹೇಲಿಕಾ' ಇವುಗಳಿಗೆ ಸಮನವಾದ ಕನ್ನಡ ಪದವಿದು"[೧೩] ಎಂದಿದ್ದಾರೆ.

"ಒಡಪು ಎಂಬುದು ಮಾತ್ರ ಜನಸಾಮಾನ್ಯರ ಬಾಯಲ್ಲಿ ಬದುಕಿರುವ ಪದ. ಒಡ= ಒಡೆ= Union, Being to gether, together, with ಎಂಬುದಕ್ಕೆ 'ಪು' ಪ್ರತ್ಯಯ ಹತ್ತಿ ಸಿದ್ದವಾದ ನಾಮಪದ ಗಂಡು ಮತ್ತು ಹೆಂಡತಿಯ ಹೆಸರಿಗೆ ವರ್ಣನಾತ್ಮಕ ಹಿನ್ನೆಲೆಯಾಗಿ ಅದರೊಂದಿಗೆ ಒಡಗೂಡಿಯೇ ಬರುವುದರಿಂದ ಇದು ಒಡಪು. ಇಲ್ಲಿ ಸಮಸ್ಯೆಗಾಗಲಿ, ಗೂಢತೆಗಾಗಲಿ ಅವಕಾಶವಿಲ್ಲ. ಆದುದದರಿಂದ ಒಗಟು ಇಲ್ಲವೆ ಒಗಟೆ ಮತ್ತು ಒಡಪು ಇವು ಒಂದೇ ಅರ್ಥವುಳ್ಳ ಪದಗಳಾಗಿರದೆ ಭಿನ್ನಾರ್ಥವುಳ್ಳ ಪದಗಳಾಗಿವೆ."[೧೪] ಎಂದು ವಿಶ್ಲೇಷಣೆಗೆ ಒಳಪಡಿಸಿದ್ದಾರೆ.

"ಜನಪದ ಗದ್ಯ ಸಾಹಿತ್ಯದಲ್ಲಿಯ ವಿಶಿಷ್ಟ ಪ್ರಕಾರಗಳಾದ ಗಾದೆ, ಒಗಟು, ಒಡಪುಗಳ ಅಭ್ಯಾಸ ಮಾಡುವಾಗ ವಚನ ಸಾಹಿತ್ಯದ ನೆನಪು ಮರುಕಳಿಸುತ್ತದೆ. ಎರಡರಲ್ಲೂ ಒಂದು ಬಗೆಯ ಸಾಮ್ಯ ಎದ್ದು ಕಾಣುತ್ತದೆ. ಒಂದು ಇನ್ನೊಂದರ ಉಗಮಕ್ಕೆ ಪ್ರಭಾವ ಬೀರಿರಬಹುದೆಂಬ ವಿಚಾರ ಸ್ಪಷ್ಟಪಡಿಸುತ್ತದೆ. ಇವೆರಡರಲ್ಲಿ ಜನಪದ ಸಾಹಿತ್ಯದ ಪ್ರಾಚೀನತೆಯನ್ನು ಸ್ಥಾಪಿಸಬೇಕಾಗಿಲ್ಲ. ಹೀಗಾಗಿ ವಚನ ಸಾಹಿತ್ಯದ ಉಗಮಕ್ಕೆ ಇದುವೇ ಪ್ರೇರಕ ಎಂಬುದಾಗಿ ಹೇಳಬೇಕಾಗುತ್ತದೆ."[೧೫] ಎನ್ನುವಲ್ಲಿ ಜ್ಯೋತಿ ಹೊಸೂರರ ತೌಲನಿಕ ದೃಷ್ಟಿಕೋನವನ್ನು ಗುರುತಿಸಬಹುದು. ಒಗಟುಗಳ ಉಗಮದ ಕುರಿತಾಗಿ ಜಿಜ್ಞಾಸೆ ಮಾಡುತ್ತಾರೆ. ವಿವಿಧ ವಿದ್ವಾಂಸರ ವಿಚಾರಧಾರೆ ಎತ್ತಿಕೊಂಡು ಚರ್ಚಿಸಿದ್ದಾರೆ.

ವಚನ ಸಾಹಿತ್ಯದ ಉಗಮ ವಚನಕ್ಕೆ ಪ್ರೇರಣೆಯನ್ನು ಇದರಲ್ಲಿ ಚರ್ಚಿಸಿವುದು, ಕುತುಹಲಕಾರಿ ಅಂಶವಾಗಿದೆ. ವಚನಕಾರರಾದ ಶಿವಶರಣರು ವ್ಯವಸ್ಥಿತ ಶಿಕ್ಷಣ ಪಡೆದ ಪಂಡಿತರಲ್ಲಿ ಆದರೆ ಜನಜೀವನವನ್ನು ಹಿಂದಿನಿಂದ ಹರಿದು ಬಂದ ಸಂಸ್ಕೃತಿ ಸಂಪ್ರದಾಯಗಳನ್ನು ತಮ್ಮ ಚಿಕಿತ್ಸಕ ಬುದ್ಧಿಯಿಂದ ತೂಗಿನೋಡಿದವರೂ ಅಲ್ಲಿಯ ಒಳಿತನ್ನೇ ಸ್ವೀಕರಿಸಿರಿ, ಕೊಳೆಯನ್ನು ಬೀಸಾಡಿದರು. ಅಂದಿನ ಜನ ಜೀವನದ ಸೊತ್ತಾಗಿ ಉಳಿದಿದ್ದ ಜನಪದ ಸಾಹಿತ್ಯದ ಪ್ರಕಾರಗಳಾದ ಗಾದೆ, ಗೀತ, ಒಡಪು, ಒಗಟು ಮುಂತಾದವು ಶಿವಶರಣರ ಮೇಲೆ ಸಾಕಷ್ಟು ಪರಿಣಾಮ ಮಾಡಿರಬೇಕು. ಸಹಜ ಸಾಹಿತ್ಯವಾದ ಜನಪದ ಸಾಹಿತ್ಯದ ಸರಳತೆ ಅವರ ಮನ ಸೆಳೆದಿರಬೇಕು. ತಾವು ಕಂಡು ಕಂಡುಂಡ ಅನುಭಾವ ಸತ್ಯವನ್ನ ಕ್ರಾಂತಿಕಾರಕ ವಿಚಾರಗಳನ್ನು ಜನಸಾಮಾನ್ಯರ ಹೃದಯಕ್ಕೆ

ನೇರವಾಗಿ ಮುಟ್ಟಬಲ್ಲ ಜನಪದ ಸಾಹಿತ್ಯದ ಮಾದರಿಯಲ್ಲಿ ಅಭಿವ್ಯಕ್ತ ಮಾಡಲು ಅವರು ಮೊದಲು ಮಾಡಿರಬೇಕು. ಗದ್ಯದ ಸರಳತೆ ಪದ್ಯದ ಗೇಯತೆಗಳೆರಡೂ ವಚನಗಳ ವೈಶಿಷ್ಟ್ಯವೆಂಬ ಅಂಶ ಮೇಲಿನ ಮಾತಿಗೆ ಪುಷ್ಠಿಯನ್ನಿರುತ್ತದೆ. ಎಂದು ತಮ್ಮ ತಿರ್ಮಾನ ಪ್ರಕಟಿಸಿದ್ದಾರೆ. ಖಚಿತ ನಿಲುವನ್ನು ಇಲ್ಲಿ ಕಾಣಬಹುದಾಗಿದೆ.

"ಜನಪದ ಸಾಹಿತ್ಯದ ಒಂದು ಪ್ರಕಾರವಾದ ಒಡಪುಗಳ ಒಂದು ಸಂಗ್ರಹಕ್ಕೆ ಈ ವರೆಗೆ ಬೆಳಕು ಕಂಡಿಲ್ಲ. ಇಷ್ಟೇ ಅಲ್ಲಿ ಇವುಗಳನ್ನು ಕುರಿತು ಒಂದು ಲೇಖನವೂ ಪ್ರಕಟವಾದಂತಿಲ್ಲ. ಹಳ್ಳಿಗರಲ್ಲಿ ಪರಂಪರೆಯಿಂದ ಪ್ರಚಾರದಲ್ಲಿರುವ ಒಡಪುಗಳನ್ನು ಅನುಕರಿಸಿ, ಒಬ್ಬಬ್ಬರು ಸ್ವತಃ ರಚಿಸಿ ಒಗಟಿನ ಮಾಲೆ ಎಂಬ ಹೆಸರಿನಿಂದ ಹೊರತಂದಿದ್ದರೂ ಅವು ಜನಪದ ಒಡಪುಗಳಾಗಲಾರವು. ಅವುಗಳಲ್ಲಿ ಕೃತಿಮತೆ ಮನೆಮಾಡಿರುವದನ್ನು ಮೇಲು ನೋಟದಿಂದಲೇ ಕಂಡು ಕೊಳ್ಳಬಹುದು. ಕೃತಿಮತೆಗೆ ಮನ ಸೋತಿರುವ ಅಕ್ಷರಸ್ಥರಲ್ಲಿ ಇತ್ತೀಚೆಗೆ ಇಂಥ ಒಡಪುಗಳ ಬಳಕೆ ಹೆಚ್ಚುತ್ತಿದೆ ಪ್ರಸ್ತುತ ಸಂಗ್ರಹದಲ್ಲಿಯ ಒಡಪುಗಳು ಮಾತ್ರ ನೇರವಾಗಿ ಹಳ್ಳಿಯ ನಿರಕ್ಷರಗಳಾದ ಹೆಂಗಸರಿಂದ ಗಂಡಸರಿಂದ ಸಂಗ್ರಹಿಸಿದ್ದು ಇಷ್ಟು ಸಂಖ್ಯೆಯಲ್ಲಿ ಇಂಥ ಒಡಪುಗಳ ಸಂಗ್ರಹ ಪ್ರಕಟವಾಗುತ್ತಿರುವುದು ಇದೇ ಮೊದಲ ಸಲ."[೧೬] ಎಂದಿರುವುದು ವ್ಯಾಪಕ ಅಧ್ಯಯನದ ಫಲವಾಗಿದೆ. ಮುನ್ನುಡಿ ಬರೆದ ಕೃಷ್ಣಶರ್ಮರು ಹೊಸೂರರಿಗೆ ಮೊದಲ ಮಾರ್ಗದರ್ಶಕರಾಗಿ ಈ ಸಂಕಲನ ಪ್ರಕಟಿಸುವ ಪ್ರಶಂಸನೀಯ ಕಾರ್ಯಾ ಕೈಗೊಂಡಿದ್ದಾರೆ. ಎಂದು ಹೇಳಿರುವುದು ಹೊಸೂರರ ಹೇಳಿಕೆಯನ್ನು ಅನುಮೋದಿಸಿದಂತಾಗಿದೆ. ಇದು ಮೊದಲ ಕೃತಿ ತೂಕದ್ದಾಗಿದೆ. ಜನಪದ ಸಾಂಸ್ಕೃತಿಯ ಅಧ್ಯಯನಕ್ಕೆ ಆಕಾರಗ್ರಂಥವಾಗಿದೆ. ಎಂಬ ಮಾತುಗಳು ಪ್ರಸ್ತುತ ಕೃತಿಯ ಮಹತ್ವವನ್ನು ಸಾರುತ್ತವೆ.

ಲೇಖಕರು ಅರಿಕೆಯಲ್ಲಿ ಸಹಾಯ ಸಹಕಾರ ಮಾಡಿದವರಿಗೆ ಒಂದು ಪುಟ ಮೀಸಲಿಟ್ಟಿದ್ದಾರೆ. ಆದರೆ ಒಡಪು ಸಂಗ್ರಹ ಕಾಲದಲ್ಲಿ ಕ್ಷೇತ್ರ ಕಾರ್ಯದ ಅನುಭವದ ಬಗ್ಗೆ ಕೃತಿಯಲ್ಲಿ ಯಾವುದೇ ಪ್ರಸ್ತಾಪವನ್ನು ನೀಡಿದ ಒಡಪು ಸಂಗ್ರಹ ಊರುಗಳನ್ನು ಮಾತ್ರ ತಿಳಿಸಿರುತ್ತಾರೆ. ಒಡಪು ಹೇಳಿದವರ ಹೆಸರು ವಿಳಾಸ ತಿಳಿಸದಿರುವುದು ಈ ಕೃತಿಯಲ್ಲಿ ಕೊರತೆ ಎದ್ದು ಕಾಣುತ್ತದೆ.

'ಹೆಸರಹೇಳ್ತಿನಿ ಒಡಪಕಟ್ಟಿ' ಒಡಪುಗಳ ಸಂಗ್ರಹವಾಗಿದೆ. ಈ ಒಡಪುಗಳ ಮಧ್ಯದಿಂದ ಜಿನುಗುವ ಅಲಂಕಾರ, ಗೇಯತೆಗಳು, ಒಡಪುಗಳಿಗೆ ಕಾವ್ಯದ ಸೌಂದರ್ಯ ತುಂಬಿದೆ. ಈ ಅಪೂರ್ವವಾದ ಒಡಪುಗಳು ಗಂಡ ಹೆಂಡಿರ ಸರಸಲೋಕವನ್ನೇ ಕಣ್ಣೆದುರು ನಿಲ್ಲಿಸುತ್ತದೆ. 'ಗರತಿಯಹಾಡು' ಸಂಗ್ರಹದ ದೃಷ್ಠಿಯಿಂದ ತ್ರಿಪದಿಗಳಿಗೆ ಆದಿಕಾತಿಯಾಗಿರುವಂತೆ, 'ಹೆಸರಹೇಳ್ತಿನಿ ಒಡಪುಕಟ್ಟಿ' ಒಡಪುಗಳಿಗೆ ಆದಿ ಸಂಗ್ರಹವಾಗಿದೆ."[೧೭] ಉತ್ತರ ಕರ್ನಾಟಕದಲ್ಲಿ ಮೊದಲಗಿತ್ತಿಯರು ಹೇಳುವ ಒಡಪುಗಳು

ಪತಿಯ ಹೆಸರು ಹೇಳುವುದಾದರೆ, ಯುವತಿಯರು ಹೇಳುವ ಒಡಪುಗಳು ಪ್ರೀತಿಯನ್ನು ಪ್ರದರ್ಶನ ಮಾಡುವ ವಕ್ರೋಕ್ತಿಗಳಾಗಿರುವುದಲ್ಲದೆ, ನೇರ ನುಡಿಯಾಗಿ ಕಂಡು ಬರುತ್ತದೆ. ಗಂಡ ಹೆಂಡಿರ ವಿನೋದಕ್ಕಾಗಿ ಹಂಗಿಸುವದಕ್ಕಾಗಿ, ಗೇಲಿಮಾಡುವುದಕ್ಕಾಗಿ, ಅಣಕಿಸುವುದಕ್ಕಾಗಿ, ಹಾಸ್ಯ ಮಾಡುವುದಕ್ಕಾಗಿ ಮೈಮನ ಜುಮ್ಮು ಅನ್ನುವಂತೆ, ಅನುಭವವಾಗುವ ಮತ್ತು ಜ್ಞಾನಶಕ್ತಿಗೆ ಜಾಗೃತಿಗೊಳಿಸುವ ಕೆಲಸ ಮಾಡುವವು. ಈ ಒಡಪುಗಳು ಅನಕ್ಷರು ಆದರೂ ಇವರು ತಮ್ಮ ಜಾಣ್ಮೆಯನ್ನು ಪ್ರದರ್ಶನ ಮಾಡುತ್ತಾರೆ.

"ಜನಪದ ಸಾಹಿತ್ಯದ ಸಂಕಲನಗಳಲ್ಲಿ ಇದರದೇ ಆದ ಒಂದು ವೈಶಿಷ್ಟ್ಯವಿದೆ ತೀಡಿದ್ದನೇ ತೀಡುವುದರಲ್ಲಿ ಯಾವ ಅರ್ಥವೂ ಇಲ್ಲ ಶ್ರೀ ಬೆಟಗೇರಿಯವರ ನಿಕಷಕ್ಕಿಳಿದ ಈ ಕೃತಿಯ ಬಗ್ಗೆ ಹೆಚ್ಚು ಹೇಳಲೇಬೇಕಾದುದು ಇಲ್ಲ. 'ಮಾಧುರ್ಯದ ಮೋದಕ' ದೊಂದಿಗೆ 'ಮೊಂಡು ತುಂಡು ನುಡಿ' ಗಳ ನಂಟು ಜೀವನದಲ್ಲಿಯ ಅಂಟಿಕೊಂಡಿರುವಾಗ ಸಾಹಿತ್ಯದಲ್ಲಿ ಏಕೆ ಬೇಡ ? ಕೆಲವೊಂದು ಒಗಟುಗಳು ಆಧುನಿಕ ಅತ್ಯಾಧುನಿಕವೆನ್ನುವುದನ್ನು ಸಹಜವಾಗಿ ಗುರುತಿಸಬಹುದು ! ಆದರಿಂದ ಆ ಪರಂಪರೆಯು ಹರಿಗಡಿಯದೆ ಬಂದಿದೆಯನ್ನುವುದನ್ನು ಸ್ಪಷ್ಟವಾಗುವದು. ಅಂದಿನ ಒಗಟುಗಳ ಹಿಂದಿನ ಜೀವನಕ್ಕೂ ಇಂದಿನ ಒಗಟುಗಳ ಹಿಂದಿನ ಜೀವನವನ್ನು ಸಹಜವಾಗಿಯೇ ಅಂತರ ಕಂಡು ಬರುವುದು. ಶ್ರೀ ಬೇಂದ್ರೆಯವರು ಹೇಳಿದಂತೆ ಇಂದಿನ ಜೀವನವೇ ಹಳಸಿರುವಾಗ ಅದರ ವಾಸನೆ ಸಾಹಿತ್ಯಕ್ಕೆ ಬಡಿಯದಿರಲಾರದು, ಜೀವನವೇ ತಿಣಕುತ್ತಿರುವಾಗ ಸಾಹಿತ್ಯವೂ ತಿಣಕದಿರುವುದೇ ? ನಮ್ಮ ನಾಡಿನಲ್ಲಿ ಸಿಕ್ಕುವ ಒಡಪುಗಳೆಲ್ಲ ಒತ್ತಟ್ಟಿಗೆ ಬರುವುದಕ್ಕೆ ಆಹ್ವಾನ ಎತ್ತಂತಾಗಿದೆ."[೧೮] ಈ ಕೃತಿಯನ್ನು ಹಾರೈಸುತ್ತಾರೆ.

'ಒಡಪು ಹೇಳುವ ಸಂದರ್ಭ ಅದರ ಬಾಹ್ಯ ರೂಪಗಳನ್ನು ಚರ್ಚಿಸಿದ್ದಾರೆ. ವಚನಗಳಿಗೆ ತ್ರಿಪದಿ ಮೂಲವಾಗಿರಬಹುದೆಂದ ಡಾ. ಚಿದಾನಂದಮೂರ್ತಿಗಳ ಮತ್ತು ಗಾದೆ ಒಗಟುಗಳು ಪ್ರೇರಕವಾಗಿರಬಹುದೆಂದು ಶ್ರೀ ಸುಧಾರಕ ಅವರ ವಾದವನ್ನು ಅಲ್ಲಗಳೆಯುತ್ತಾ ಲೇಖಕರು ವಚನ ಸಾಹಿತ್ಯದ ಉಗಮಕ್ಕೆ ಜನಪದ ಸಾಹಿತ್ಯದ ಯಾವೊಂದು ಬಿಡಿರೂಪ ಪ್ರಕಾರ ಪ್ರೇರಣೆ ನೀಡಿರಬಹುದೆನ್ನದೇ ಇಡಿಯಾಗಿ ಅದರ ಎಲ್ಲ ಪ್ರಕಾರಗಳೂ ಪ್ರೇರಕವಾಗಿರಬಹುದೆಂದು ಹೇಳುವುದು ಸೂಕ್ತ' ಎಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಜನಪದ ಸಾಹಿತ್ಯದ ಎಲ್ಲ ಪ್ರಕಾರಗಳಿಗೆ (ಅಂದರೆ ಕಥೆ ಒಟ್ಟು) ಹಾಡು ಒಗಡು, ಒಡಪು, ಗಾದೆ, ಮುಂತಾದವುಗಳಿಗೆಲ್ಲ ಒಂದೇ ರೂಪ ತ್ರಿಪದಿ ಪ್ರೇರಕವಾಗಿರಬಹುದೆಂದು ಸಾಧಿಸುವುದು ಹೆಚ್ಚು ಸುಲಭ, ಹೀಗಿದ್ದಾಗ ವಚನ ಸಾಹಿತ್ಯಕ್ಕೆ ತ್ರಿಪದಿಯ ಮೂಲವೆಂಬ ಅಭಿಪ್ರಾಯದಲ್ಲಿ ಹೆಚ್ಚು ಸತ್ಯವಿದ್ದಂತೆ ತೋರುತ್ತದೆ. ಒಡಪುಗಳನ್ನು ಹೆಣ್ಣು ಮಕ್ಕಳ ಒಡಪು, ಗಂಡು ಮಕ್ಕಳ ಒಡಪು ಎಂದು ವಿಭಾಗಿಸಿದ್ದೇನೊ ಸರಿಯೇ ಆದರೆ ಒಂದೊಂದರಲ್ಲಿ 'ಸುಲಗಾಯ ಮುಂದ ಸುಳದಾಡತಾನ', 'ಆಡತಾನ ನೋಡತಾನ'

ಮುಂತಾದ ಉಪವಿಭಾಗಗಳನ್ನು ಮಾಡಿದ್ದು ಸರಿಯಲ್ಲ. ಒಂದು ಭಾಗಕ್ಕೂ ಇನ್ನೊಂದು ಭಾಗಕ್ಕೂ ಸ್ಪಷ್ಟ ವ್ಯತ್ಯಾಸಗಳಿಲ್ಲದಾಗ ಇಂಥ ಉಪವಿಭಾಗೀಕರಣ ಕೃತಕವಾಗುತ್ತದೆ. ಇಷ್ಟೆಲ್ಲಾ ಆಗಿಯೂ ಜ್ಯೋತಿ ಹೊಸೂರ ಬಹಳ ಅಪರೂಪದ ಕೆಲಸ ಮಾಡಿದ್ದಾರೆಂದು ಒಪ್ಪಲೇಬೇಕು."[೧೯] ಎಂದು ಖ್ಯಾತ ವಿದ್ವಾಂಸರಾದ ಸಿಂಪಿ ಲಿಂಗಣ್ಣನವರು ಮೊದಲ ಹೇಳಿಕೆಯಲ್ಲಿ ಯಾವುದೇ ಭಿನ್ನಾಭಿಪ್ರಾಯವಿಲ್ಲದೇ ಹೊಸೂರ ಹೇಳಿಕೆಯನ್ನು ಒಪ್ಪಿಕೊಂಡು ಒಡಪು ಸಂಗ್ರಹಕ್ಕೆ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ಆದರೆ ಎರಡನೇ ಹೇಳಿಕೆಯಲ್ಲಿ ಖ್ಯಾತ ವಿದ್ವಾಂಸರು ಹಂಪಿ ವಿ.ವಿ. ವಿಶ್ರಾಂತಿ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರ ಹೇಳಿಕೆ ಕೆಲವು ಕಡೆ ಭಿನ್ನಾಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕೊನೆಗೆ ಹೊಸೂರ ಒಡಪು ಭಾಗ ವಿಂಗಡನೆ ಚನ್ನಾಗಿದೆ. ಹೆಣ್ಣು ಮತ್ತು ಗಂಡು ಒಡಪುಗಳೆಂದರೆ ಸಾಕು ಇದಕ್ಕೆ ಬೇರೆ ಹೆಸರು ನೀಡುವುದು ಸರಿಯಲ್ಲ. ಒಟ್ಟಿನಲ್ಲಿ ಹೊಸೂರ ಮಾಡಿದ ಕಾರ್ಯ ಒಳ್ಳೆಯದು ಎಂದು ಒಪ್ಪಿಕೊಂಡಿದ್ದಾರೆ.

ಈ ಕೃತಿಯ ಎರಡನೇ ಮುದ್ರಣಕೊಂಡಿದ್ದು ಕೃತಿಯ ಮೌಲಿಕವಾಗಿರುವುದನ್ನು ತಿಳಿಸುತ್ತದೆ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಎಂ.ಎ. ತರಗತಿಗೆ ಜನಪದ ವಿಷಯಕ್ಕೆ ಪಠ್ಯ ಪುಸ್ತಕವಾಗಿರುವುದು ಸ್ಮರಣೀಯ ಸಂಗತಿಯಾಗಿದೆ. "ಒಡಪುಗಳ ಸಂಗ್ರಹ ಸಂಯೋಜನೆ ಅಭ್ಯಾಸ ಸಾಹಿತ್ಯ ದೃಷ್ಟಿಯಿಂದ ಮಾತ್ರ ಮುಖ್ಯವಲ್ಲ. ಸಮಾಜವಿಜ್ಞಾನ, ಮನೋವಿಜ್ಞಾನ, ಭಾಷಾ ವಿಜ್ಞಾನ ದೃಷ್ಟಿಯಿಂದಲೂ ಅಷ್ಟೇ ಮುಖ್ಯ ಎಂಬುದನ್ನು ಅರಿತು ಇಂತಹ ಸಂಗ್ರಹಗಳನ್ನು ಕನ್ನಡಿಗರು ಬರಮಾಡಿಕೊಳ್ಳಬೇಕಾಗಿದೆ. ಎನ್ನುವ ಹೊಸೂರರ ಅಭಿಪ್ರಾಯ ಸಮುಚಿತವಾದುದು. ಇಂಥ ಜಾನಪದಾಸಕ್ತರಿಂದಲೇ ಜಾನಪದ ಸಂಪತ್ತಿನ ಸಂಗ್ರಹ ಸಂಯೋಜನೆ, ಪ್ರಕಟನ ಸಾಧ್ಯ, ಜಾನಪದ ಸಾಹಿತ್ಯದ ಒಡಪುಗಳ ವಿರಳ ಸಂಗ್ರಹದಲ್ಲಿ ಅಪರೂಪದ ಸಂಗ್ರಹವಿದು ಒಂದೆಡೆ ವಿಫುಲ ಸಂಖ್ಯೆಯಲ್ಲಿ ಒಡಪುಗಳು ಪ್ರಕಟಗೊಳುತ್ತಿರುವುದು ಇದೆ ಮೊದಲೆಂದು ತೋರುತ್ತಿದೆ."[೨೦] ಎಂದಿರುವುದು ಗಮಾನರ್ಹವಾಗಿದೆ.

**ಹೆಣ್ಣು ಮಕ್ಕಳ ಒಡಪುಗಳು**

೧. "ಅಮಾಸಿ ಕತ್ತಲಿ ಗೋದಿ ಬಿತ್ತಲಿ
ಹೆಸರ ಕೇಳವರ ಹೆಣಾ ಎತ್ತಲಿ....

೨. ತೊಗರಿ ಕಟಿಗಿ ಚಾಟ
ಬಂಗಾರ ತಾಟ
ಹೆಸರ ಕೇಳವರ ಹಲ್ಲಾಗ ನನ್ನ ಹಾಟ...

೩. ಗೋದಿರೊಟ್ಟಿ ಒಡಮೂರ ಸೆಟ್ಟಿ
ನನ್ನ ಹೆಸರ ಕೇಳೊದೊಂದು ಪುಗಸೆಟ್ಟಿ"[೨೧] ..........

**ಗಂಡು ಮಕ್ಕಳ ಒಡಪುಗಳು**

೧. "ಅವಳಿ ಜವಳಿಕೆರಿ
ಕೆರ‍್ಯಾಗ ನೂರ ಗರಿ
ಹೆಸರ ಕೇಳಕ್ಕನ ಪುಚ್ಚ ಹಿಡದ ತರಿ .......

೨. ಅರಕಟ್ಟಿ ಮರಕಟ್ಟಿ
ಮರಕಟ್ಟಿ ಮೋತ ಕಟ್ಟಿ
ಪಂಚಾಳ ಕಟ್ಟಿ ಪಗಟಿ ಕಟ್ಟಿ
ಹೆಸರ ಕೇಳ್ಯಾಕ್ಕಿನ ಹೆಡಮುರಕಿ ಕಟ್ಟಿ
ಕೋಲ್ಯಾಗ ಹೆಟ್ಟಿ."[೨೨] .......

ತುಂಬಾ ಸೊಗಸಾದ ರಸವತ್ತಾ ಒಡಪುಗಳು ಇದರಲ್ಲಿವೆ. ಅದರ ಸೊಗಸನ್ನು ಓದಿಯೇ ಸವಿಯಬೇಕು. ಓದುಗರಿಗೆ ಒಂದು ಒಳ್ಳೆಯ ರಸಾನುಭವವಾಗುತ್ತದೆ. ಶಾಸ್ತ್ರಿಯವಾಗಿ ಮುನ್ನುಡಿ, ಅರಿಕೆ, ಪ್ರಸ್ತಾವಣೆ, ವಿಂಗಡನೆ, ಟಿಪ್ಪಣೆ, ಶಬ್ದಕೋಶ ನೀಡಿರುವುದು ಜಾನಪದೀಯ ಶಿಸ್ತಿಗೆ ವೈಚಾರಿಕ ಅಂಶಕ್ಕೆ ಸಾಕ್ಷಿಯಾಗಿದೆ.

**ಶಿವಶರಣರ ಕ್ರಾಂತಿಕಾರಿ ಮೌಲಿಕ ವಚನಗಳು.**

ಶಿವಶರಣರ ಕ್ರಾಂತಿಕಾರಿ ಮೌಲಿಕ ವಚನಗಳು ಜ್ಯೋತಿ ಹೊಸೂರರು ಸಂಪಾದಿಸಿದ ವೈಚಾರಿಕಕೃತಿ, 'ಕಾಲಗತಿ' ಪ್ರಕಾಶನದಿಂದ ಪ್ರಕಟವಾಗಿ ೨೦೦೨ ರಲ್ಲಿ ಇದು ಹೊರ ಬಂದಿದೆ. ೧೧೦ ಪುಟಗಳ ವ್ಯಾಪ್ತಿಯಿದೆ. ಪುರೋಗಾಮಿ ಸ್ವಭಾವದ ಕ್ರಾಂತಿಕಾರಿ ಮತ್ತು ಮೌಲಿಕ ವಚನಗಳನ್ನು ಮಾತ್ರ ಪ್ರತ್ಯೇಕಿಸಿ ಅವು ಜನತೆಯ ಗಮನ ಸೆಳೆಯುವ ವ್ಯವಸ್ಥೆಯಲ್ಲಿ ಹೀಗಾಗಿ ವಚನಕಾರರ ಪ್ರಗತಿ ಕ್ರಾಂತಿಕಾರಿ ನಿಲುವು ಜನರಿಗೆ ತಲುಪಿಲ್ಲ. ಈ ಕೊರತೆ ತುಂಬಲು ಮೌಲಿಕ ಹಾಗೂ ಕ್ರಾಂತಿಕಾರ ವಚನಗಳನ್ನು ಮಾತ್ರ ಆಯ್ದುಕೊಂಡು ತಾವು ಸಂಗ್ರಹಿಸಿರುವುದಾಗಿ ತಿಳಿಸಿದ್ದಾರೆ.

"ಇಂದಿನ ವೈಜ್ಞಾನಿಕ ಮನೋಭಾವದಿಂದಾಗಿ ಜನತೆಯಲ್ಲಿ ಜಾಗೃತಗೊಂಡಿರುವ ವೈಚಾರಿಕ ಪ್ರಜ್ಞೆಯನ್ನು ತಣಿಸುವ ಶಕ್ತಿ ಇಲ್ಲಿ ಹರಳುಗೊಂಡಿದೆ. ಎಂದು ಹೇಳಬಹುದು ಶಿವಶರಣರ ವೈಚಾರಿಕತೆಯನ್ನು ಕ್ರಾಂತಿಕಾರರ ದೋರಣೆಯನ್ನು ಆಸಕ್ತರು ಪ್ರಾಸ್ತಾವಿಕವಾಗಿ ಪ್ರತಿಪಾಸಿಸಲು ಈ ಕೃತಿಯ ಆಕರವಾಗಬಲ್ಲುದೆಂದು".[೨೩] ಆಶಿಸಲಾಗಿರುವುದೆಂದು ಸಂಪದಕೀಯಲ್ಲಿ ಸ್ಪಷ್ಟಪಡಿಸಿದ್ದಾರೆ.

ಪ್ರಸ್ತಾವನೆಯ ತುಂಬ ಮೌಲಿಕವಾಗಿದೆ. ಸ್ವತಂತ್ರ ವೈಚಾರಿಕ ಲೇಖನದಂತೆ ಓದಿಸಿಕೊಳ್ಳುತ್ತದೆ. "ಕಾಲಾತೀತ ದೇಶಾತೀತವಾಗಿ ಚಿರಮೌಲ್ಯವುಳ್ಳ ಕೆಲವು ವಚನಗಳು ಕನ್ನಡದ ಮೇರೆದಾಟಿ ಒಟ್ಟು ಮಾನವತೆಯ ಕಲ್ಯಾಣಶಕ್ತಿ ಹೊಂದಿದೆ. ಲಕ್ಷಾವಧಿ ಸಂಖ್ಯೆಯಲ್ಲಿ ರಚನೆಗೊಂಡಿರುವ ಅಪಾರ ವಚನ ರಾಶಿಯಲ್ಲಿಯ ಸತ್ವಯುತವಾಗಿರುವ

ಇಂಥ ಹಲವಾರು ಮೌಲಿಕ ವಚನಗಳು ಎಲ್ಲೆಡೆಯಲ್ಲಿ ಮತ್ತು ಸದಾ ಕಾಲದಲ್ಲಿ ಚಲಾವಣೆಯಲ್ಲಿದ್ದರೆ ಅವುಗಳಿಂದಾಗಿ ಜಾಗತಿಕ ಮಟ್ಟದ ಚಿಂತನಶೀಲರಿಂದಲೂ ಕನ್ನಡಕ್ಕೆ ಗೌರವ ಪ್ರಾಪ್ತವಾಗುತ್ತದೆಯೆಂದು ಹೇಳುವ ಧೈರ್ಯ ಮಾಡಬಹುದು."[೨೪] ಎಂದಿದ್ದಾರೆ.

"ವಚನ ಸಾಹಿತ್ಯದಲ್ಲಿಯ ವೈಚಾರಕ ಮೌಲ್ಯಗಳು ಲಿಂಗಾಯತ ಮತಕ್ಕೆ ಮಾತ್ರ ಸೀಮಿತಗೊಳ್ಳಬಾರದು. ಮತಾತೀತವಾಗಿ ಒಟ್ಟು ಮಾನವತೆಯ ಕಲ್ಯಾಣದಲ್ಲಿ ಗುರಿಯಿಟ್ಟು ಆಳವಾಗಿ ಚಿಂತನ ಮಾಡಿ ರಚಿಸಿರುವ ವಚನಗಳು ದಿವ್ಯದರ್ಶನ ಮಾಡಿಸುತ್ತದೆ. ಅಂಥ ಶ್ರೇಷ್ಠತಾ ಶ್ರೇಷ್ಠ ವಚನಗಳು ಆಸಕ್ತರಿಗೆ ಸುಲಭವಾಗಿ ಲಭ್ಯವಾಗಬೇಕಿದೆ. ಮತಾಚಲಿತವಾಗಿ ವಿಚಾರಶೀಲರಾದ ಎಲ್ಲಿರಿಗೂ ಅಪ್ಯಾಯನವಾಗುವ ವಚನಗಳನ್ನು ಮಾತ್ರ ಆಯ್ದು ಪ್ರಚಾರಗೊಳಿಸುವುದು ಪ್ರಸಾರಗೊಳಿಸುವುದರ ಅಗತ್ಯತೆ ಎಂದಿಗಿಂತಲೂ ಇಂದು ಹೆಚ್ಚಾಗಿದೆ".[೨೫] ಎನ್ನುವುದು ಸ್ಪಷ್ಟವಾಗಿದೆ.

'ವಿಶಿಷ್ಟ ಹಿತಾಸಕ್ತಿಯ ವ್ಯಕ್ತಿ ಶಕ್ತಿಯಿಂದ ಗುಂಪು ವ್ಯವಸ್ಥೆಯ ಕುತಂತ್ರದಿಂದ ಅಂದು ಆಗುತ್ತಿದ ಶೋಷಣೆ ವಂಚನೆಗಳನ್ನು ಬಯಲುಗೊಳಿಸಿ ಜನಜಾಗೃತಿ ಮಾಡಿದರು'.

'ದೇವರು ದೇವಾಲಯಗಳ ಪ್ರಭಾವ ಯಜ್ಞ-ಯುಗಾದಿಗಳ ಆಕರ್ಷಣೆ, ವರ್ಣಭೇದ, ಲಿಂಗಭೇದಗಳ ಕುತಂತ್ರ್ಯ ಡಂಬಾಚಾರ ವಿವಿಧ ಮೂಡನಂಬಿಕೆಗಳು ಇತ್ಯಾದಿಗಳನ್ನು ತಮ್ಮ ವಚನಗಳ ಮೂಲಕ ಅತ್ಯಗ್ರವಾಗಿ ಹಾಗೂ ಅತ್ಯಂತ ತೀಕ್ಷ್ಣ ರೀತಿಯಲ್ಲಿ ಖಂಡಿಸಿದವರೆಂದರೆ ಶಿವಶರಣರಾಗಿದ್ದಾರೆ. ಈ ಬಗೆಯ ಖಂಡನೆಗಾಗಿ ಅತೀ ನೇರವಾದ ಮೊನಚಾದ ಮತ್ತು ಸರಳವೂ ಪರಿಣಾಮಕಾರಿಯೂ ಆದ ಭಾಷೆಯನ್ನು ಶರಣರು ಬಳಸಿದ್ದೊಂದು ವಿಶೇಷ'.

'ಅಭಿವ್ಯಕ್ತಿಯಲ್ಲಿಯ ಮುಕ್ತ ಸ್ವಾಂತಂತ್ರ್ಯವೇ ವಚನ ಸಾಹಿತ್ಯದ ಹಿರಿಮೆ ಅಭಿವ್ಯಕ್ತಿಯ ಮುಕ್ತ ಸ್ವಾತಂತ್ರ್ಯದಂತೆಯೇ ಅವರು ಒಳಿತಿಗಾಗಿ ಸತ್ಯಕ್ಕಾಗಿ ಪರಿವರ್ತಿನಶೀಲರೂ ಆಗಿದ್ದರೆಂಬುದು ಉದಾತ್ತವಾದ ಮಹತ್ವದ ವಿಷಯ'. ಅಭಿವ್ಯಕ್ತಿಯಲ್ಲಿಯ ಅವರು ಪ್ರಾಮಾಣಿಕತನ ಮತ್ತು ಬಿನ್ನಾಭಿಪ್ರಾಯ ವ್ಯಕ್ತಗೊಳಿಸುವ ಧೈರ್ಯ ಹಾಗೂ ಭಿನ್ನಾಭಿಪ್ರಾಯ ಸಹಾನುಭೂತಿಯಿಂದ ಸಹಿಸಿಕೊಳ್ಳುವ ಸ್ವೀಕರಿಸುವ ಉದಾರ ಉನ್ನತ ಸ್ವಭಾವ ಇತ್ಯಾದಿಗಳನ್ನು ಸರಿಯಾಗಿ ಗ್ರಹಿಸಿಕೊಳ್ಳಬೇಕು'. ಶಿವಶರಣರು ಅಂದಿನ ಪರಂಪರೆಯ ತತ್ವ ಸಿದ್ಧಾಂತಗಳಲ್ಲಿರುವ ಪೊಳ್ಳತನ ಮತ್ತು ಗೊಡ್ಡುತನ, ಇತ್ಯಾದಿಗಳನ್ನು ಧೈರ್ಯದಿಂದ ಪ್ರಶ್ನಿಸಿದರು. ಮಾನವ ಮುಖ್ಯ ಮತ್ತು ಮಾನವನ ಜೀವನ ಮುಖ್ಯವೆಂಬ ವಾಸ್ತವ ಪ್ರತಿಪಾದಿಸಿದವರು'. 'ವೇದಾದಿಗಳು ಅಪೌರುಷೆಯವೆಂದೂ ಅವುಗಳ ಪ್ರಾಮಾಣ್ಯ ಪ್ರಶ್ನಾತೀತವೆಂಬ ಪರಂಪರೆಯನ್ನು ಶಿವಶರಣರ ಬಲವಾಗಿ ಖಂಡಿಸಿದರು.'

"ಮಾನವ ಮೌಲ್ಯದ ಶ್ರೇಷ್ಠತೆಯನ್ನು ವಚನಗಳ ಮೂಲಕ ಶಿವಶರಣರು

ಬಿಂಬಿಸಿದರು."[೨೬] ಹೀಗೆ ಇಡೀ ಪ್ರಸ್ತಾವನೆಯು ಅತ್ಯಂತ ಉನ್ನತ ವಿಚಾರಗಳಿಂದ ಕೂಡಿದೆ. ವಚನ ಸಾಹಿತ್ಯವನ್ನು ಹೊಚ್ಚ ಹೊಸ ದೃಷ್ಟಿಯಿಂದ ನೋಡಿರುವುದನ್ನು ಕಾಣಬಹುದು. ಮತಾತೀತ, ಕಾಲಾತೀತವಾಗಿ ನೋಡುವ ಕ್ರಮ ಇಲ್ಲಿದೆ. ಅಪ್ಪಟ ವಿಚಾರವಾದಿಗಳ ಶಿವಶರಣರ ವಚನಗಳಿಗೆ ಇಲ್ಲಿ:'ವಜ್ರದಸಾಣಿ' ಹಿಡಿದ ಅನುಭವವಾಗುತ್ತದೆ. ಪ್ರಸ್ತಾವಣೆಯುನ್ನು ತಿರು-ತಿರುಗಿ ಓದುವಂತಾಗುತ್ತದೆ. ಓದಿದಾಗೊಮ್ಮೆ ಹೊಸ ಹೊಸ ಅರ್ಥಸುರಿಸುತ್ತದೆ. ಪ್ರಗತಿಪರ ನಿಲುವು. ವೈಚಾರಿಕ ದೃಷ್ಟಿ ಕೋನದಿಂದ ವಚನ ಅಧ್ಯಯಿನಿಸಿದ ಕ್ರಮವಿಲ್ಲದೆ ಬಹಳ ಮುಖ್ಯವಾಗಿ ತೋರುವ ಅಂಶವೆಂದರೆ.

"ಈ ವಚನಗಳು ಯಾವುದೊಂದು ವಿಶಿಷ್ಟ ಮತ ಪಂಥಗಳ ಬಗ್ಗೆ ನಿರೂಪಿಸಿದೇ ಒಟ್ಟಾರೆಯಾಗಿ ಇಡೀ ಮಾನವತೆಯುನ್ನು ಗುರಿಯಾಗಿಟ್ಟುಕೊಂಡಿರುವುದನ್ನು ಮರೆಯುವಂತಿಲ್ಲ"[೨೭] ಎನ್ನುತ್ತಾರೆ. "ಇಡೀ ಮಾನವತೆಯನ್ನೆಲ್ಲ, ತನ್ನ ತೆಕ್ಕೆಯಲ್ಲಿ ಅಪ್ಪಿಕೊಳ್ಳುವ ವಿಶಾಲತೆಯನ್ನು ಒಳಗೊಂಡಿರುವ ವಚನಗಳನ್ನು ಮಾತ್ರ ಆಯ್ದು ಪ್ರಕಟಿಸಿದರೆ ಅವುಗಳಿಂದ ಮಾನವತೆಯ ಉತ್ಥಾನದ ಪಥದರ್ಶನ ಸಾಧ್ಯವಾಗಬಲ್ಲುದು."[೨೮] ಎಂಬುದು ಸ್ಪಷ್ಟವಾಗಿದೆ. ಇವೆಲ್ಲ ಮಾನವೀಯತೆಯ ಹುಡುಕಾಟ ವಿಶ್ವಮಾನವತೆಯ ಜಿಜ್ಞಾಸೆಯಿದೆ. ಇಂಥ ಮೌಲಿಕ ಪ್ರಸ್ತಾವಣೆಗಾಗಿ ಹೊಸೂರರು ವಿಚಾರವಾದಿಗಳ ಅಭಿನಂದನೆಗೆ ಪಾತ್ರರಾಗಿದ್ದಾರೆ.

ವೇದ ಪುರಾಣ ಶಾಸ್ತ್ರದಿಗಳ ಖಂಡನೆ, ಯಜ್ಞ-ಯುಗಾದಿ ಖಂಡನೆ ದೇವಲೋಕ, ಕೈಲಾಸ, ಸ್ವರ್ಗಗಳ ನಿಜರೂಪ ಪ್ರಚಲಿತ ದೇವರ ಖಂಡಸಿ, ದೇವರೆಂದರೆ ಯಾರು ? ಲಿಂಗದ ನಿಲುವು, ಸ್ಥಾವರಲಿಂಗ ಪೂಜೆ, ಗುಡಿ ನಿರ್ಮಾಣ ಇತ್ಯಾದಿ ಖಂಡನೆ, ಸೋಗು ಸೋಗಿನ ಆಚರಣೆಗಳ ಖಂಡನೆ, ಶುಬಾ ಶುಬ ಮುಹೂರ್ತ ಶಕುನ ಇತ್ಯಾದಿ ಖಂಡನೆ, ಇಂದ್ರಿಯ ಸುಖ ಜಿಜ್ಞಾಸೆ ಕಾಯದ ಮಹತ್ವ, ಕಾಯಕವೇ ಕೈಲಾಸ ಹೆಣ್ಣಿನ ವಾಕ್ತವತೆ, ಚಿಂತನ, ಜ್ಞಾನ, ಕ್ರಿಯಾ ಸಮನ್ವಯ, ಕಾಯಕ, ಹಣ, ಬಳಕೆ ನಿಜವಾದ ಹಿರಿತನ, ಹಿರಿಯರು, ಆತ್ಮ ವಿಮರ್ಶೆ ಮೌಲಿಕ ವಚನಗಳು. ಹೀಗೆ ವಿವಿಧ ವಿಭಾಗಗಳ ಅಡಿಯಲ್ಲಿ ಶಿವಶರಣರ ವಚನಗಳನ್ನು ಪೋಣಿಸಿದ್ದಾರೆ. ವಿಭಜನೆಯಲ್ಲಿ ಒಂದು ಅಚ್ಚುಕಟ್ಟುತನವಿದೆ. ಇವೆಲ್ಲವೂ ಮೌಲಿಕಗಳೇ ಆಗಿರುವದರಿಂದ, ಕೊನೆಯಲ್ಲಿ ಅವುಗಳ 'ಮೌಲಿಕ' ವಚನಗಳೆಂದು ಮತ್ತು ಶಿರ್ಷಿಕೆ ನೀಡಬೇಕಿರಲಿಲ್ಲ. ಅಲ್ಲಿರುವ ಹದಿನಾಲ್ಕು ವಚನಗಳು, ಮಾನವತೆಗೆ, ದಯೆ, ಸತ್ಯ, ನ್ಯಾಯ, ಅರಿವು, ನಡೆ, ನುಡಿ, ಮುಂತಾದವುಗಳನ್ನು ಸಂಕಲನಗೊಳಿಸಿರುವುದರಿಂದ 'ಮೌಲಿಕ'ದ ಬದಲಾಗಿ 'ಮಾನವೀಯ ಮೌಲ್ಯದ' ವಚನಗಳೆಂದು ಅಥವಾ ವಿಶ್ವಮಾನವ ಪ್ರಜ್ಞೆಯ ವಚನಗಳೆಂದೇ, ಹೆಸರಿಸಬಹುದಿತ್ತು. ಶಿವಶರಣರ ಬಿಡಿ ನುಡಿಗಳನ್ನೇ 'ಸಿಡಿದ ಬಿಡಿ ಕಿಡಿನುಡಿಗಳು ಶಿರ್ಷಿಕೆಯುಡಿಯುಲ್ಲಿ 'ಬೆನ್ನುಡಿ'ಯುಲ್ಲಿ ದಾಖಲಿಸಿರುವುದು ಸ್ಪಷ್ಟವಾಗಿದೆ.

ಅನುಬಂಧ ಒಂದರಲ್ಲಿ ವಚನಕಾರರು ವಚನಾಂಕಿತ ಮೊದಲು ಕೊಟ್ಟು ಆ ಮೇಲೆ ಅವರ ಹೆಸರುಗಳನ್ನು ನೀಡಿದ್ದಾರೆ. ಅನುಬಂಧ ಎರಡರಲ್ಲಿ ಆಕಾರಾದಿಯಾಗಿ 'ವಚನಾಂಕಿತ ಕ್ಕೆ ಅನುಗುಣವಾಗಿ ಜೋಡಿಸಿ ವಚನಕಾರರ ಹೆಸರುಗಳನ್ನು ನೀಡಿದ್ದಾರೆ. ಇದರಲ್ಲಿ ಯಾವುದಾದರೂ ಒಂದನ್ನು ನೀಡಿದ್ದರೂ ಸಾಕಾಗುತ್ತಿತ್ತು. ಪುಟ ಸಂಖ್ಯೆಯಾಗಿ ಇಂಗ್ಲೀಷ ಅಂಕಿ ಬಳಸಿರುವುದು ಕನ್ನಡಪ್ರಿಯರಿಗೆ ಇರಿಸುಮುರಿಸಾಗುತ್ತದೆ. ಸಂಕಲನದಲ್ಲಿ ಮುವತ್ತೆಂಟು ವಚನಕಾರರಿಂದ ಮುನ್ನೂರಾ ಎಂಟು ವಚನಗಳನ್ನು ಇದರಲ್ಲಿ ಎರಡು ಸಾಲಿನ ವಚನಗಳಿಂದ ಮೊದಲುಗೊಂಡು (ದಿಟವ ನುಡಿವುದು ನುಡಿದಂತೆ ನಡೆವುದು ಪುಟ-೧೦೨) ಐವತ್ತೊಂಭತ್ತು ಸಾಲುಗಳನ್ನುಳ್ಳ (ಅಯ್ಯ ನಾವು ಪರಮವಿರಕ್ತರು ವಚನ-೪೨ ಪುಟ-೫೭) ವಚನಗಳು ಈ ಸಂಕಲನದಲ್ಲಿವೆ.

ಪ್ರಸ್ತಾವನೆಯಲ್ಲಿ ಪ್ರಸ್ತುತ ಸಂಕಲನ ಅತಿ ಸಣ್ಣದಾಗಿದೆ. ಇದಕ್ಕಿಂತ ಹೆಚ್ಚು ಸಂಖ್ಯೆ ವಚನಗಳ ಆಯ್ಕೆ ಪ್ರಸ್ತಾವಣೆಯಲ್ಲಿ ಇನ್ನಷ್ಟು ವ್ಯವಸ್ಥಿತ ವಿಶ್ಲೇಷಣೆ ಅಗತ್ಯವೆಂಬ ಅರಿವು ನನಗಿದೆ. ಇದು ಎದ್ದು ಕಾಣುವ ಕೊರತೆಯೆಂಬುದರಲ್ಲಿ ಸಂಶಯವಿಲ್ಲ, ಎಂದಿರುವುದು ಅವರ ಸೌಜನ್ಯ ಮತ್ತು ಪ್ರಾಮಾಣಿಕತೆಯ ಕುರುಡಾಗಿದೆ. ಮುಂದೊಮ್ಮೆ ಈ ಕೊರತೆ ನೀಗಿಸಲು ಪ್ರಯತ್ನಿಸಬೇಕೆಂಬ ಬಯಕೆ ಇದೆ ಎಂದಿರುವುದು ಓದುಗರಿಗೆ ಆಶಾದಾಯಕವಾಗಿದೆ. ಅವರ ಬಯಕೆ ಕೈಗೊಡುವಂತಾಗಲಿ ವಿಸ್ತಾರವಾದ ಪ್ರಸ್ತಾವಣೆ ಹೆಬ್ಬೊತ್ತಿಗೆ ಬೇಗನೆ ಲಭಿಸುವಂತಾಗಲಿ ಇಷ್ಟನ್ನು ಇದೀಗ ಕೊಟ್ಟಿದ್ದಾರಲ್ಲ. ಅದಕ್ಕಾಗಿ ಮೊಟ್ಟಮೊದಲು ಅಭಿನಂದಿಸೋಣ.

**ದತ್ತಗೌರವ**

'ದತ್ತಗೌರವ' ಜ್ಯೋತಿ ಹೊಸೂರ ಅವರ ಸಂಪಾದಿಸಿದ ಮಹತ್ವದ ಸಂಭಾವನಾಗ್ರಂಥ, ಪ್ರಾಚಾರ್ಯ ಎಂ.ಪಿ.ಬಿರಾದರ ಪಾಟೀಲ ಅವರು ಸಂಯೋಜಕರಾಗಿ ಕಾರ್ಯ ನಿರ್ವಹಿಸಿದ್ದಾರೆ. 'ಕಾಲಗತಿ' ಪ್ರಕಾಶನದಿಂದ ೨೦೦೪ ರಲ್ಲಿ ಪ್ರಕಟವಾದ ಗ್ರಂಥವಿದು. "ವಂಶವಾಹಿನಿಯೊಂದಿಗೆ ಒಡಮೂಡಿಬಂದ ಕಲೆಗಾರಿಕೆ, ಪ್ರತಿಭಾಯುಕ್ತ ವಾಗ್ಮಿತೆ, ಸಂಸ್ಕಾರದಿಂದ ಗಳಿಸಿದ ಪಾಂಡಿತ್ಯ ಮತ್ತು ಜನಜೀವನದೊಂದಿಗೆ ಸಮರಸಗೊಳ್ಳುವ ಗುಣಗಳಿಂದಾಗಿ ಶ್ರೀ ಡಿ.ಬಿ. ಪತ್ತಾರ ಅವರು ಜನಸಾಮಾನ್ಯರಲ್ಲಿಯೂ, ಅಸಮಾನ್ಯತೆ ಪಡೆದುಕೊಂಡ ವ್ಯಕ್ತಿಯಾಗಿ ಬೆಳೆದರು. ತಮ್ಮ ಪರಿಸರವನ್ನು ಬೆಳಗಿದರು. ತಮ್ಮ ಸಂಪರ್ಕದಲ್ಲಿ ಬಂದವರಿಗೂ ಪ್ರೇರಣೆ ನೀಡಿದರು. ಸದಾಕಾಲದಲ್ಲಿಯೂ ಪಾದರಸದಂತಹ ಚಟುವಟಿಕೆ ಹೊಂದಿದ್ದು ಅವರು ಅದ್ಬುತ ಕ್ರಿಯಾಶಾಲಿಗಳು, ಮುಖ್ಯಾಧ್ಯಾಪಕರಾಗಿ, ಪ್ರಾಚಾರ್ಯರಾಗಿ, ವಿಶ್ವಕರ್ಮ, ಸಮಾಜ ವಿಕಾಸ ಸಂಸ್ಥೆ ಅಧ್ಯಕ್ಷರಾಗಿ ಅವರು ಸಲ್ಲಿಸಿದ ಸೇವೆ ಐತಿಹಾಸಿಕ ಮಹತ್ವಗಳಿಸಿದೆ. ಆದ್ದರಿಂದ ಅದು ದಾಖಲೆಗೊಳ್ಳಬೇಕಾಗಿದೆ."[೫] ಎಂದು ಸಂಪಾದಕರ ಮಾತು ಸ್ಪಷ್ಟವಾಗಿದೆ.

"ತ್ಯಾಗ ಸೇವೆ ಮತ್ತು ಪ್ರೇಮಗಳ ಪ್ರತೀಕ ಪತ್ತಾರ ಸರ್ ಪ್ರತಿಭೆ, ಕರ್ತವ್ಯಧಕ್ಷತೆ, ಸಮರ್ಥಆಡಳಿತ, ಶೈಕ್ಷಣಿಕ ಶಿಸ್ತು ವಿದ್ಯಾರ್ಥಿ, ಸಹ ಶಿಕ್ಷಕರಲ್ಲಿ ಪ್ರೇಮ, ಹಲವು ಹತ್ತಾರು ಚತುರತೆಯ ಗುಣಗಳ ಸಂಪುಟವೆನಿಸಿದರು. ಅಪಾರ ವಿದ್ಯಾಪ್ರೇಮಿ ಜನಾನುರಾಗಿಯೊದ ಇವರೊಬ್ಬ ವ್ಯಕ್ತಿಯಾಗಿರದೆ ಶಕ್ತಿಯಾಗಿದ್ದಾರೆ. ಶಿಕ್ಷಕರಿಗೆ ಮಾದರಿ ಶಿಕ್ಷಕರಾಗಿ ಅವಿರತವಾಗಿ ದುಡಿದ ಜೀವ ಇವರು ಶಿಕ್ಷಣ ಪ್ರಸಾರದ ಪವಿತ್ರ ಕಾರ್ಯದಲ್ಲಿ ಶ್ರದ್ಧಾನಿಷ್ಠೆಯಿಂದ ದುಡಿದ ಪುಣ್ಯ ಪುರುಷ. ಇದರಿಂದಾಗಿ ಸಮಾಜದಲ್ಲಿಯ ಕೂಲಿ ಮಾಡುವವರಾದಿಯಾಗಿ ಎಲ್ಲರ ನೆರವು ಪ್ರವಾಹೋಪಾದಿಯಲ್ಲಿ ಹರಿದು ಬಂದಿತು. ಹಾರುಗೇರಿಯ ಅಂದಿನ ಪರಿಸರವೂ ಆದರ್ಶಮಯವಾಗಿತ್ತು".[೩೦] ಎಂದಿರುವ ಪ್ರಾಚಾರ್ಯ ಎಂ.ಪಿ. ಬಿರಾದಾರ ಪಾಟೀಲರ ಮಾತುಗಳು ಹಾರುಗೇರಿ ಪರಿಸರ ಪತ್ತಾರ ಅವರ ವ್ಯಕ್ತಿತ್ವ ಎರಡನ್ನು ಸಮರ್ಥವಾಗಿ ಪರಿಚಯಿಸುತ್ತವೆ.

ಹೀಗೆ ವ್ಯಕ್ತಿತ್ವ ಪ್ರಭುದರ್ಶನ, ಶಿಷ್ಯಗೌರವ, ಸಹೃದಯರ ಸದಭಿಪ್ರಾಯಗಳು, ಸಹಪಾಠಿಗಳ ಸ್ಮೃತಿ ಚಿತ್ರಣ, ಸಂಬಂಧಿಕರ ಅನಿಸಿಕೆಗಳು, ಸಹೋದ್ಯೋಗಿಗಳ ಪರಿಚಯ, ಆಯ್ದಭಾವ ಚಿತ್ರಗಳು ಮತ್ತು ಶ್ರೀ ಡಿ.ಬಿ. ಪತ್ತಾರ ಜೀವನದ ಪ್ರಮುಖ ಘಟನಾವಳಿ ಸೂಚಿ, ಬಂಗಾರದ ಬದುಕಿನ ಪತ್ತಾರ ಹೀಗೆ ಪರಿವಿಡಿಯಲ್ಲಿ ವಿಶಿಷ್ಠವಾಗಿ ಸಂಪಾದಕರು ವರ್ಗೀಕರಿಸಿದ್ದಾರೆ. "ಪತ್ತಾರರು ನಾನು ಎಂ.ಎ. ಮಾಡುವಾಗ ಅನುಕೂಲತೆಗಳನ್ನು ಮಾಡಿಕೊಟ್ಟರು. ನನ್ನ ಅಭಿವೃದ್ಧಿಯ ಸಂಗತಿಗಳನ್ನು ಕಂಡು ಖುಷಿ ಪಡುತ್ತಿದ್ದರು. ನನಗೆ ಆಗಿನಿಂದಲೂ ಅವರೊಬ್ಬ ಅಪರೂಪದ ಬಹುದೊಡ್ಡ ಅಂತಃಕರಣದ ವ್ಯಕ್ತಿತ್ವ ಹೊಂದಿದವರಾಗಿ ಕಾಣುತ್ತಲೇ ಬಂದಿದ್ದಾರೆ".[೩೧] ಎಂದು ಖ್ಯಾತ ಕವಿ ಕಾದಂಬರಿಕಾರ, ನಾಟಕಕರಾದ ಡಾ. ಚಂದ್ರಶೇಖರ ಕಂಬಾರ ಅವರು ಹೇಳಿದ್ದು ನೋಡಿದರೆ, ಡಿ.ಬಿ. ಪತ್ತಾರ ಸರ್ ಹಿರಿಮೆ ಗರಿಮೆಗಳ ಅರ್ಥವಾಗುತ್ತದೆ.

ಅಂತಹ ಆದರ್ಶ ಪುರುಷನಿಗೆ ಅಭಿನಂದನ ಗ್ರಂಥವನ್ನು ಸಮರ್ಪಿಸಿರುವುದು. ಸಾರ್ಥಕ ಮತ್ತು ಧನ್ಯತೆಯ ಕಾರ್ಯವಾಗಿದೆ. 'ಅಧಿಕಾರದಲ್ಲಿದಾಗ ಗೌರವ ಸಲ್ಲಿಸುವುದಕ್ಕಿಂತಲೂ ಜೀವನ ಸಂಧ್ಯಕಾಲದಲ್ಲಿ ಸಲ್ಲಿಸುವ ಗೌರವ ನಿಜವಾದ ಆದರಭಾವ ಹೊಂದಿರುತ್ತದೆ ಎಂಬುದರಲ್ಲಿ ಸಂಶಯವಿಲ್ಲ' ಎಂಬ ಸಂಪಾದಕರ ನಿವೇದನೆ ಸಮಂಜಸವಾಗಿದೆ. ಇದೊಂದು ಘನಕಾರ್ಯ, ಮಹಾಕಾರ್ಯವೇ ಹೌದು ಇಂಥ ಸಾಂಸ್ಕೃತಿಕ ಮತ್ತು ಐತಿಹಾಸಿಕ ಕಾರ್ಯದಲ್ಲಿ ಸರ್ವರೂ ಸಂಭ್ರಮದಿಂದ ಕೈ ಜೋಡಿಸಬೇಕಾಗಿತ್ತು. 'ಲೇಖನ, ಅನಿಸಿಕೆಗಳ ಬರಹಗಳು ಸಮಾಧಾನವಾಗುವಂತೆ ಬರಲಿಲ್ಲ' ವೆಂಬುದು ವಿಷಾದಕರ ಸಂಗತಿಯಾಗಿದೆ. ಸಾಂಸ್ಕೃತಿಕ ಜಗತ್ತಿಗೆ ಮಾಡುವ ಅಪಚಾರವಿದು ಲೇಖಕರಲ್ಲಿ ಆವರಿಸಿದ ಜಡತ್ವವಿದು ಹೀಗಿದ್ದರೂ ಅಪಾರ ಪರಿಶ್ರಮದಿಂದ ಜ್ಯೋತಿ ಹೊಸೂರ ದತ್ತಗೌರವ ಸಂಪಾದಿಸಿದ್ದಾರೆ.

ಡಿ.ಬಿ. ಪತ್ತಾರ ತಮ್ಮನ್ನು ತಾವು ಕಂಡುಂಡ, ಜೀವ ನಾನುಭವದ ಕುರಿತಾಗಿ ಮೊದಲ ಭಾಗದಲ್ಲಿ ದಾಖಲಿಸಬಹುದಿತ್ತು. ಹಾರೂಗೇರಿ ಪರಿಸರ ರಾಯಬಾಗ ಪ್ರಾದೇಶಿಕ ಚಿತ್ರಣ ಶೈಕ್ಷಣಿಕ ಸ್ಥಿತಿಗತಿ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಚಿತ್ರಣಗಳನ್ನುಳ್ಳ ಲೇಖನಗಳನ್ನು ಕಟ್ಟಿಕೊಡಬಹುದಾಗಿತ್ತು. ಕೊನೆಯಲ್ಲಿ ಕನ್ನಡದಲ್ಲಿಯೇ ಮುದ್ರಿಸಬಹುದಿತ್ತು. ಇವೆಲ್ಲ ತೀರ ಸಣ್ಣ ಹಾಗೂ ಗೌಣ ವಿಷಯಗಳು. ಆದರೂ ಜ್ಯೋತಿ ಹೊಸೂರ ಅಂದರೆ ಶಿಸ್ತು ಅಚ್ಚುಕಟ್ಟುತನಕ್ಕೆ ಹೆಸರಾದವರು ಅವರಿಂದ ಇಂಥವರನ್ನು ನಿರೀಕ್ಷಿಸುವುದು, ತಪ್ಪಲ್ಲ, ಒಂದು ಜನಾಂಗವೇ ಅವರನ್ನು ಅನುಕರಿಸುತ್ತದೆ.

**ಶಂಕರಾಭಿನಂದನ:**

ಖ್ಯಾತ ನ್ಯಾಯವಾದಿ ಶ್ರೀ ಎಸ್.ಬಿ.ಪಾಟೀಲ ಅವರ 'ಸಂಭಾವನಾಗ್ರಂಥ' ವಿದ್ದು. ಬೆಳಗಾವಿಯ ಶ್ರೀ ಎಸ್.ಬಿ. ಪಾಟೀಲ 'ಷಷ್ಟ್ಯಬ್ದಿ' ಸಮಾರಂಭ ಸಮಿತಿ'ಯು ಇದನ್ನು ೧೯೯೯ ರಲ್ಲಿ ಪ್ರಕಟಿಸಿದೆ. ಜ್ಯೋತಿ ಹೊಸರ ಸಂಪಾದಕತ್ವದಲ್ಲಿ ಈ ಕೃತಿ ಹೊರಬಂದಿದೆ.

"ಮಾನವನು ತನ್ನ ಒಳ್ಳೆಯ ಗುಣಗಳಿಂದಾಗಿ ಒಳ್ಳೆಯ ಕಾರ್ಯಗಳಿಂದಾಗಿ ಸಮಾಜದಲ್ಲಿ ಒಂದು ವಿಶಿಷ್ಟ ಸ್ಥಾನಮಾನಗಳಿಸುತ್ತೇನೆ. ಶ್ರೀ ಎಸ್.ಬಿ. ಪಾಟೀಲ ವಕೀಲರು, ಸಹಿತ ಆ ಬಗೆಯ, ಸ್ಥಾನಮಾನಗಳಿಸಿರುವ ಸಜ್ಜನರಾಗಿದ್ದಾರೆ. ಅವರ ಹೆಸರು, ಶಂಕರ, ಹೆಸರಿಗೆ ತಕ್ಕಂತೆ ಒಳ್ಳೆಯದನ್ನು ಮಾಡುವ 'ಶಂಕರ' ಅವರಾಗಿದ್ದಾರೆ. ಈ ಸಂಕೇತಿಕತೆಯನ್ನು ಧ್ವನಿಸಲು ಈ ಸಂಭಾವನಾ ಗ್ರಂಥಕ್ಕೆ 'ಶಂಕರಾಭಿನಂದನ ಗ್ರಂಥವು ಸಿದ್ಧವಾಗಿದೆ."[೨] ಎಸ್.ಬಿ. ಪಾಟೀಲರ ಚಟುವಟಿಕೆಗಳ ಪರಿಚಯ ಇದರಲ್ಲಿದೆ.

ಬೆಳಗಾವಿ ರುದ್ರಾಕ್ಷಿ ಮಠದ ಶ್ರೀ ಮ.ನಿ.ಪ್ರ. ಸಿದ್ದರಾಮ ಮಹಾಸ್ವಾಮಿಗಳವರು 'ನಮ್ಮ ಬೆಳಗಾವಿ' ನಗರದ ಖ್ಯಾತ ನ್ಯಾಯವಾದಿಗಳಾದ ಎಸ್.ಬಿ. ಪಾಟೀಲರು ಹಿತಮಿತ ಭಾಷೆಗಳು ನಯ-ವಿನಯ ಸಂಪನ್ನರು, ನಿರಾಡಂಬರ ಜೀವನ ನಡೆಸುತ್ತಿರುವ ಅವರು ಶಿಕ್ಷಣ ಪ್ರೇಮಿಗಳು ಬಡವರ ಬಂಧುಗಳು ಆಗಿದ್ದಾರೆ. ತಮ್ಮ ಜೀವನದ ಮೂವತ್ತೈದು ವರ್ಷಗಳ ವಕೀಲ ವೃತ್ತಿಯಲ್ಲಿ ಅನೇಕ ಜನಪರ ಕಾರ್ಯವನ್ನು ಮಾಡಿ ಜನಮನ್ನಣೆ ಗಳಿಸಿದ್ದಾರೆ. ಹಲವಾರು ಸಂಘ ಸಂಸ್ಥೆಗಳ ಅಧ್ಯಕ್ಷರಾಗಿ, ಉಪಾಧ್ಯಕರಾಗಿ, ಸದಸ್ಯರಾಗಿ ನಿರ್ದೇಶಕರಾಗಿ ಅಪಾರ ಸೇವೆ ಸಲ್ಲಸಿದ್ದಾರೆ. ಅವರು ಜನ ಸೇವೆಯನ್ನೇ ಜನಾರ್ಧನ ಸೇವೆ ಎಂದು ಅರಿತು ನಡೆದವರು".[೩೩] ಎಂದಿರುವ ಮಾತುಗಳು ಪಾಟೀಲರ ಕಾರ್ಯ ವ್ಯಕ್ತಿತ್ವವನ್ನು ಪರಿಚಯಿಸಿವೆ.

'ಶಂಕರಾಭಿನಂದನ' ನಾಲ್ಕು ಭಾಗದಲ್ಲಿ ರೂಪುಗೊಂಡಿದೆ. ಸಂಪಾದಕೀಯ, ಪ್ರಾಕಾಶಕರ ನುಡಿ, ಆಶಿರ್ವಾಚನ, ಪಾಟೀಲರ ಪರಿಚಯ ಲೇಖನಗಳಿವೆ. ಲಘು ಪರಿಚಯವು ಕಿರುಚರಿತ್ರೆಯಾಗಿ ಮಡುಗಟ್ಟಿದೆ. ಬೆಳಗಾವಿಯಲ್ಲಿ ಒಬ್ಬ ನಿಜಮಾನವ, ವಕೀಲ ವೃತ್ತಿಯಲ್ಲಿಯ ಸಾಧನೆಯ ಶಿಖರಗಳು, ವ್ಯಕ್ತಿತ್ವದ ವಿಶೇಷತೆ, ಸಾಮಾಜಿಕ

ಕಾರ್ಯಗಳ ಇಣುಕುನೋಟ, ಅರವತ್ತರ ತರುಣ ಸಂತೃಪ್ತಿ ಕುಟುಂಬ ಜೀವನ ಶಿಕ್ಷಣಕ್ಕಾಗಿ ಅಲೆದಾಟ, ಕಾನೂನು ಪದವಿಧರ ಮುಕ್ತಾಯಕ್ಕೆ ಮುನ್ನ ಈ ಉಪಶಿರ್ಷಿಕೆಯಲ್ಲಿ ಹೊಸೂರರು ಪಾಟೀಲ ವ್ಯಕ್ತಿತ್ವದ ದರ್ಶನ ಮಾಡಿಸಿದ್ದಾರೆ. ಕನ್ನಡ, ಇಂಗ್ಲೀಷ, ಮರಾಠಿ ಮೂರು ಭಾಗಗಳಲ್ಲಿ ಹಲವು ಲೇಖನಗಳಿವೆ. ಕನ್ನಡ ವಿಭಾಗದಲ್ಲಿ ಇರುವ ಪಿ.ಎಂ. ಪಾಟೀಲ, ಎಸ್.ಬಿ. ಪಾಟೀಲ ಸರ್, ನೆನೆಯುತ್ತಾ ಹೀಗೆ ಏಳು ಲೇಖನಗಳು ವಿವಿಧ ಮುಖವನ್ನು ಅನಾವರಣದಗೊಳಿಸುತ್ತವೆ. ಇಂಗ್ಲೀಷನ ನಾಲ್ಕು ಲೇಖನಗಳು, ಮರಾಠಿಯ ಎರಡು ಲೇಖನಗಳು ಈ ಗ್ರಂಥಕ್ಕೆ ವೈವಿಧ್ಯತೆಯನ್ನು ತಂದಿತ್ತಿವೆ.

ಕೊನೆಯಲ್ಲಿ ಎಸ್.ಬಿ. ಪಾಟೀಲ ಅವರು ಜೀವನದ ಪಕ್ಷಿನೋಟವಿದೆ. ಬಾಲ್ಯ, ಶಿಕ್ಷಣ, ಮದುವೆ, ಸಂತತಿ, ವೃತ್ತಿ, ಪ್ರವಾಸ, ಸಾಮಾಜಿಕ ಜೀವನ ಈ ಶಿರ್ಷಿಕೆಗಳ ಅಡಿಯಲ್ಲಿ ಮಾಹಿತಿ ಸಂಕಲಿಸಲಾಗಿದೆ. ಪುಸ್ತಕ '೫೪' ಪುಟಗಳ ವ್ಯಾಪ್ತಿ ಪಡೆದಿದೆ. ಆರವತ್ತರ ಸಮಾರಂಭಕ್ಕೆ ಅರವತ್ತು ಪುಟಗಳನ್ನು ಇಟ್ಟುಕೊಂಡಿದ್ದರೆ, ಸಾಂಕೇತಿಕವಾಗಿ ಮತ್ತು ಅರ್ಥಪೂರ್ಣವಾಗಿ ಧ್ವನಿ ಪಡೆಯುತ್ತಿತ್ತು. ಪುಟ ಸಂಖ್ಯೆಯನ್ನು ಕನ್ನಡದಲ್ಲಿ ಬಳಸಲು ಸಾಧ್ಯವಿದ್ದರೆ ಇನ್ನು ಸೊಗಸಾಗಿರುತಿತ್ತು. ಹಿರಿಯರನ್ನು, ಕಿರಿಯರು ಅನುಕರಿಸುವದರಿಂದ ತಪ್ಪು ಸಂದೇಶ ಹೋಗಬಹುದಾದುದನ್ನು ತಪ್ಪಿಸಲು ಸಾಧ್ಯವಿತ್ತು.

ಕೃತಿಯಲ್ಲಿ ವರ್ಣರಂಜಿತ ಭಾವಚಿತ್ರಗಳಿವೆ. ಆಯಾ ವಿಭಾಗಕ್ಕೆ ಸಂಬಂಧಿಸಿದ ವಿಷಯವಾರು ಫೋಟೋಗಳನ್ನು ಅಳವಡಿಸಿದ್ದು ಅರ್ಥಪೂರ್ಣವಾಗಿದೆ. ಪುಸ್ತಕದ ಎರಡು, ಮೂರನೇ ರಕ್ಷಾ ಪುಟದಲ್ಲಿ ಬಣ್ಣದ ಚಿತ್ರಗಳಿರುವುದು ಕಳೆಕಟ್ಟಿದೆ. ಗ್ರಂಥದ ಉದ್ದಕ್ಕೂ ಸಂಪಾದನೆಯ ಶಿಸ್ತಿದೆ. ವಿಷಯ ವರ್ಗೀಕರಣ, ಲೇಖನಗಳ ಅಳವಡಿಕೆ, ಮಾಹಿತಿ, ಪೂರೈಕೆ ಎಲ್ಲದರಲ್ಲಿಯೂ ಅಚ್ಚುಕಟ್ಟುತನ ಎದ್ದು ಕಾಣುತ್ತದೆ. ಜ್ಯೋತಿ ಹೊಸೂರರು ಶಿಸ್ತು ಅಚ್ಚುಕಟ್ಟುತನಕ್ಕೆ ಹೆಸರಾದವರು. ಅವರ ಸಂಪಾದನಾ ಕಾರ್ಯ ಗಮನಾರ್ಹ ಕೆಲಸವಾಗಿದೆ.

**ಸ್ನೇಹ ಸಂಪದ :**

ಬಹುಮುಖ ವ್ಯಕ್ತಿತ್ವ ಹೊಂದಿರುವ ಶ್ರೀ ಬಿ.ಎ. ಸನದಿ ಅವರ ಅಭಿನಂದನ ಸಂಪುಟವಿದು. ೧೯೯೬ ರಲ್ಲಿ ಜ್ಯೋತಿ ಹೊಸೂರ ಅವರು ಸಂಪಾದಿಸಿದ್ದಾರೆ. ಬೆಳಗಾವಿ ಬಳಿಯ ಸಣ್ಣ ಹಳ್ಳಿ ಸಿಂಧೊಳ್ಳಿಯಲ್ಲಿ ಬಡಸಾಮಾನ್ಯ ಪರಿವಾರದಲ್ಲಿ ಜನಿಸಿದ ಶ್ರೀ ಬಿ.ಎ. ಸನದಿ ಅವರು ಸೀಮಾತೀತ ಅಡತಡೆಗಳನ್ನು ಮೀರಿ ಬೆಳೆದು ಕರ್ನಾಟಕದಲ್ಲಿಷ್ಟೇ ಅಲ್ಲ, ತಮ್ಮ ಕಾರ್ಯಸಾಧನೆಗಳಿಂದ ರಾಷ್ಟ್ರ ಮಟ್ಟದಲ್ಲಿ ಹೆಸರು ಮಾಡಿದ್ದು, ಒಂದು ರೋಮಾಂಚಕಾರಿಕತೆ, ದಕ್ಷ ಅಧಿಕಾರಿ, ಸಮರ್ಥಕವಿ, ಒಳ್ಳೆಯ ಗದ್ಯಲೇಖಕ, ವಾಗ್ಮಿ, ಸಂಘಟಕ, ಸ್ನೇಹಮಯಿ, ಸೌಜನ್ಯಶೀಲ, ಸಾಮಾಜಿಕ, ಕಳಕಳಿಯ ವ್ಯಕ್ತಿ ಈ ರೀತಿ ಬಹುಮುಖ ವ್ಯಕ್ತಿತ್ವದ ಸನದಿಯವರು ಕನ್ನಡ ನಾಡುನುಡಿಗಳಿಗೆ

ಸಲ್ಲಿಸಿದ ಸೇವೆ ಅಪಾರ ಅವರಿಗೆ ಸಂದ ಪ್ರಶಸ್ತಿ ಪುರಸ್ಕಾರಗಳೂ ಅಪಾರ".[೩೪] ಬಿ.ಎ. ಸನದಿಯವರನ್ನು ಹೊಸೂರರು ಸಂಪಾದಕ ಮಾತುಗಳಲ್ಲಿ ಪರಿಚಯಿಸಿದ್ದು ವಿಶಿಷ್ಟವಾಗಿದೆ.

ಡಾ. ಪಾಟೀಲ ಪುಟ್ಟಪ್ಪರ 'ಸೂರ್ಯ ಪ್ರಕಾಶನ ಸನದಿ', ಡಾ ಬುದ್ದಣ್ಣ ಹಿಂಗ ಮಿರೆಯವರು 'ಸ್ನೇಹ ಪ್ರಕಾಶನ ಮತ್ತು ಸನದಿ', ಡಾ. ಕೆ.ಆರ್. ದುರ್ಗಾದಾಸರು 'ಕವಿ ಸನದಿ', ಡಾ. 'ಗುರುಲಿಂಗ ಕಾಪಸೆಯವರ ಸ್ನೇಹ ಸಂಬಂಧ' ಇನ್ನೂ ಅನೇಕ ವಿದ್ವಾಂಸರು ಬರೆದಿದ್ದು ಗಮನಾರ್ಹವಾಗಿದೆ. ಬಿ.ಎ. ಸನದಿಯವರ ವ್ಯಕ್ತಿತ್ವ ಮತ್ತು ಒಬ್ಬ ಒಳ್ಳೆಯ ಕವಿ ವಿದ್ವಾಂಸ ಎಂಬುದು ಅನಾವರಣವಾಗುತ್ತದೆ.

ಜ್ಯೋತಿ ಹೊಸೂರರು ಸ್ವಂತ ಏಕವ್ಯಕ್ತಿ ನೆಲೆಯಲ್ಲಿ ನಾಲ್ಕು ಗ್ರಂಥಗಳನ್ನು ಸಂಪಾದಿಸಿದ್ದಾರೆ. ಇತರರ ಜೊತೆಗೂಡಿ ಸಂಪಾದಿಸಿದ ಗ್ರಂಥಗಳು ಸಂಖ್ಯೆಯೂ ನಾಲ್ಕು, 'ಹಿಚ್ಚುಹಣ್ಣು' ಕಥಾಸಂಕಲನ (೧೯೭೯) 'ಬೆಳುವಲ' ಬೆಟಗೇರಿ ಕೃಷ್ಣಶರ್ಮರ ಅಭಿನಂದನಾ ಗ್ರಂಥ (೧೯೮೨) ಡಾ. ಬೆಟಗೇರಿ ಕೃಷ್ಣಶರ್ಮರ ಸಂಸ್ಮರಣ ಸಂಚಿಕೆಯನ್ನು ಸಂಚಿಕೆಗ್ರಂಥ 'ಕವಿಭೂಷಣ' (೧೯೮೨) ರಲ್ಲಿಯೂ ಮತ್ತು 'ಪ್ರಜ್ಞಾಪ್ರಕಾಶ' ಸ್ಮರಣ ಸಂಚಿಕೆಯನ್ನು (೧೯೮೫) ರಲ್ಲಿಯೂ ವಿದ್ವತ್‌ಪೂರ್ಣವಾಗಿ ಸಂಪಾದಿಸಿಕೊಟ್ಟಿದ್ದಾರೆ.

**೩.೨ : ವಿಮರ್ಶೆ**

"ವಿಮರ್ಶೆಯೆಂದರೆ ನಿರ್ಮಿತ ಪ್ರಧಾನವಾದ ಸಾಹಿತ್ಯವನ್ನು ಕುರಿತಾದ ಸಹೃದಯ ಸಮಗ್ರ ಪ್ರತಿಕ್ರಿಯೆ, ಈ ಸಹೃದಯ ಸಮಗ್ರ ರೀತಿಯಲ್ಲಿ ಬೆಳೆದಾಗ ವಿಮರ್ಶಕನಾಗುತ್ತಾನೆ. ಆಗ ಆತ ಸಾಹಿತ್ಯ ಕೃತಿಗಳನ್ನು ಓದಿದಾಗ ಅವನ ಮನಸ್ಸಿನಲ್ಲಿ ಉಂಟಾಗುವ ಬಿಡಿಯಾದ ಮತ್ತು ಇಡಿಯಾದ ಪ್ರತಿಕ್ರಿಯೆಯೇ ವಿಮರ್ಶೆಯ ರೂಪ ತಾಳುತ್ತದೆ. ಸಾಹಿತ್ಯ ಕೃತಿಗಳಲ್ಲಿ ಮೂಡಿರುವ ವಿಶಿಷ್ಠ ಸೌಂದರ್ಯವನ್ನು ಅದು ಗ್ರಹಿಸುತ್ತದೆ. ಸೌಂದರ್ಯ ಆನಂದಗಳ ಕಾರಣವನ್ನು ಕಂಡು ಹಿಡಿಯುತ್ತದೆ. ಅವುಗಳಲ್ಲಿ ತಲೆದೋರಿರುವ ಕೊರತೆಯನ್ನು ಗುರುತಿಸುತ್ತದೆ.

ಸಾಹಿತ್ಯವು ಸೃಜನಶೀಲ ಕ್ರಿಯೆಯಾದರೆ, ವಿಮರ್ಶೆ ಸಾಹಿತ್ಯ ಕೃತಿಯ ಪ್ರತಿಕ್ರಿಯೆ, ಸಾಹಿತ್ಯ ಜೀವನಾಭವದಿಂದ ಸೃಷ್ಠಿಯಾದರೆ, ವಿಮೆರ್ಶೆ ಸಾಹಿತ್ಯದಿಂದ ಪ್ರತಿಸ್ಪಂದನ ಹೊಂದಿ ರೂಪ ಪಡೆಯುತ್ತದೆ. ಸಾಹಿತ್ಯವು ಜೀವನ ವಿಮರ್ಶೆಯಾದರೆ ವಿಮರ್ಶೆಯ ಈ ಜೀವನ ವಿಮರ್ಶೆಯ ವಿಮರ್ಶೆಯಾಗುತ್ತದೆ ಸಾಹಿತ್ಯದಲ್ಲಿ ಕಂಡು ಬರುವ ಜೀವನ ವಿಮರ್ಶೆ ಪ್ರಧಾನವಾಗಿ ಅಂತಃಸ್ಪುರ ರೂಪದ್ದು – (Intuitive) ವಿಮರ್ಶೆಯಲ್ಲಿ ಅದು ಪ್ರಧಾನವಾಗಿ ಪ್ರಥಕ್ಕರಣಗೊಂಡಿದ್ದು (Analytical) ಒಂದರಲ್ಲಿ ಸೌಂದರ್ಯ ಸೃಷ್ಠಿಯಿದ್ದರೆ ಇನ್ನೊಂದರಲ್ಲಿ ಸೌಂದರ್ಯ ಭುಕ್ತಿ ಇರುತ್ತದೆ."[೩೫] ಎಂದು ಡಾ, ಬಸವರಾಜ ಸಬರದ ಅವರ ಮಾತು ಸ್ಪಷ್ಟವಾಗಿದೆ. ಜ್ಯೋತಿ ಹೊಸೂರ ಅವರು ಆಳವಾದ ಅಧ್ಯಯನ ಕೈಗೊಂಡವರು ವಿಮರ್ಶೆ ಕ್ಷೇತ್ರಕ್ಕೂ ಅವರ ಕೊಡುಗೆ

ನಿರ್ಣಾಯಕವಾಗಿದೆ. ಅವರ ವಿಮರ್ಶೆ ಕೃತಿಗಳು ಸ್ಥೂಲ ಅವಲೋಕನವನ್ನು ಇಲ್ಲಿ ಮಾಡಲಾಗಿದೆ.

**ಅಂತಃಸತ್ತ್ವದ ಸಾಧಕ ಕನಕದಾಸ :**

ಹರಿದಾಸರ ಸಮೂಹದಲ್ಲಿ ಕನಕದಾಸರು ವಿಭಿನ್ನ ನೆಲೆ, ವಿಶಿಷ್ಟ ವ್ಯಕ್ತಿತ್ವ, ಜ್ಯೋತಿ ಹೊಸೂರು ರೇಖಿಸಿದ ವ್ಯಕ್ತಿಚಿತ್ರವಿದು. ಕನಕದಾಸರ ಅಂತಃಸತ್ತ್ವದ ವಿವಿಧ ಮುಖಗಳ ಸರಿಯಾದ ದರ್ಶನವಾಗಬೇಕೆಂಬುದು ಕೃತಿ ರಚನೆ ಹಿಂದಿರುವ ಉದ್ದೇಶವಾಗಿದೆ.

ಅಂತಃ ಸತ್ತ್ವದ ಸಾಧಕ ಕನಕದಾಸರ ಎರಡು ನೆಲೆಯಲ್ಲಿ ಕೃತಿಯು ಬಿಚ್ಚಿಕೊಳ್ಳುತ್ತದೆ. ಪ್ರಸ್ತಾವನೆಯಲ್ಲಿ ಹರಿದಾಸ ಪರಂಪರೆ ಕನಕದಾಸರ ಸ್ಥಾನ ಮಾನ ಕನಕನಿಗೆ ದೊರೆಯದ ಮನ್ನಣೆ ಅದಕ್ಕೆ ಹಿಂದಿರುವ ಕಾರಣಗಳ ಚರ್ಚೆಯಿದೆ. ಕನಕದಾಸರು, ಕುರಿತಾಗಿ ಬಂದಿರುವ ಇಲ್ಲಿಯವರೆಗೆ ಬೆಳಕು ಕಂಡಿರುವ ಸಾಹಿತ್ಯದ ಪ್ರಸ್ತಾಪವಿದೆ. ಕನಕಸಾಹಿತ್ಯ ದರ್ಶನ ಸಂಪುಟ ನಾಲ್ಕು ಸಂಪುಟಗಳಲ್ಲಿ ಸೇರ್ಪಡೆಯಾದ ಸಾಮಗ್ರಿಯ ಪರಿಚಯವಿದೆ. "ಕನಕದಾಸರ ಜೀವನ ಚರಿತ್ರೆಯನ್ನು ಅಧಿಕಾರವಾಣಿಯಿಂದ ರೂಪಿಸಿಕೊಡಲಾಗಿದೆ. ಸಂಪಾದಕರಾರದ ನಾಡೋಜ ಡಾ.ದೇ. ಜವರೇಗೌಡ ಅವರು ಕನಕದಾಸರಿಗೆ ಸಂಬಂಧಿಸಿದ ವಿಷಯಗಳನ್ನು ಅಧ್ಯಯನ ಮಾಡಿ ಸ್ಥಳಗಳನ್ನು ಪ್ರತ್ಯಕ್ಷದಲ್ಲಿ ಸಂಚಾರ ಮಾಡಿ ಪರಿಶೀಲಿಸಿ ಸಮರ್ಥ ವಿಶ್ಲೇಷಣೆ ಮಾಡಿ ಕನಕದಾಸರ ಚರಿತ್ರೆ ಕುರಿತಾಗಿರುವ ಎಲ್ಲ ಬಗೆಯ ತರ್ಕ ವಿತರ್ಕಗಳಿಗೆ ಸಮಾಧಾನಕಾರಕ ವಿವರಣೆ ನೀಡಿ, ತಮ್ಮ ನಿರ್ಧಾರ ಪ್ರಟಿಸಿದ್ದಾರೆ. ಈ ಕಾರಣಗಳಿಂದಾಗಿ ಪ್ರಥಮ ಸಂಪುಟವು ಆಸಕ್ತರೆಲ್ಲರೂ ಗಮನಿಸಬೇಕಾದ ಅತ್ಯುತ್ತಮ ಕೃತಿಯಾಗಿದೆ. ನಾಲ್ಕು ಸಂಪುಟಗಳಿಗೆಲ್ಲ ಮೂಲಭೂತ ಆಸ್ತಿ ಭಾರವಾಗಿದೆ."[೩೬] ಎಂದು ಹೇಳಿದ್ದಾರೆ.

ಕೆಲವರು ಆಧಾರಗಳನ್ನು ತಿರುಚಿ ಬೆಲೆಯಿಲ್ಲದ ಸಂಗತಿಗಳನ್ನು ಭಿನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಹೊಸ ಬಗೆಯ ಅಭಿಪ್ರಾಯ ವ್ಯಕ್ತ ಮಾಡುವುದರಿಂದ ವಾದ ವಿವಾದ ಹುಟ್ಟು ಹಾಕಿ ಪ್ರಸಿದ್ಧಿಗಳಿಸುವ ಉದ್ದೇಶವಿದ್ದರೆ ಯಾರೇನು ಮಾಡಲು ಸಾಧ್ಯ ? ಎಂದಿರುವುದು ಲೇಖಕರ ಪ್ರಜ್ಞೆಯ ದ್ಯೋತಕವಾಗಿದೆ.

ಅಂತಃಸತ್ತ್ವದ ಸಾಧಕ ಕನಕದಾಸ ಕೃತಿ ಪ್ರವೇಶದಲ್ಲಿ ಹೇಳಿದ ಮಾತುಗಳು ಮೌಲಿಕವಾಗಿವೆ. ಓದುಗರ ತಿಳುವಳಿಕೆಯನ್ನು ವಿಸ್ತರಿಸುತ್ತದೆ. "ವಿಶಿಷ್ಟ ಹಿತಾಶಕ್ತಿ ಗಳಿಂದಾಗಿ ಸಂಪ್ರದಾಯದ ಪರಂಪರೆಯ ಹರಿದಾಸರೆಂದು ಕನಕದಾಸರನ್ನು ಎಷ್ಟೋ ಬಿಂಬಿಸಿದರೂ ತಮ್ಮಲ್ಲಿಯ ಸಹಜವಾದ ವ್ಯಕ್ತಿ ವಿಶೇಷತೆಯ ಆಂತರಿಕ ಸತ್ತ್ವದಿಂದ ಸ್ವಂತಿಕೆಯನ್ನು ಎಲ್ಲ ಬಗೆಯಲ್ಲೂ ಅಭಿವ್ಯಕ್ತ ಮಾಡಿದುದು ಅವರ ಸಾಮಾನ್ಯತೆಯ ದ್ಯೋತಕವಾಗಿದೆ. ಕನಕದಾಸರ ವೈವಿದ್ಯಪೂರ್ಣ ಕೃತಿಗಳು ಅವರ ವಿಶಾಲ ಮನೋಭಾವದ

ನಿರ್ಭಿಡೆಯ ಸ್ವಭಾವದಲ್ಲಿಯ ಸ್ವಂತಿಕೆಯ ವಿಶೇಷತೆಗಳನ್ನು ವೈಶಿಷ್ಟ್ಯಗಳನ್ನು ನಿಚ್ಚಳಗೊಳಿಸುತ್ತದೆ".[೩೭]ಎಂದು ವಿಶ್ಲೇಷಿಸಿರುವುದು ಸಮಯೋಚಿತವಾಗಿದೆ.

ಕನಕದಾಸರ ಕೆಲವು ಕೀರ್ತನೆಗಳಲ್ಲಿಯ ಕ್ರಾಂತಿಕಾರಿ ವಿಚಾರಗಳನ್ನು ಹೆಕ್ಕಿ ಕೊಟ್ಟಿದ್ದಾರೆ. ಇದು ಚಿಕಿತ್ಸಕ ಬುದ್ಧಿಯ ವಿಶ್ಲೇಷಣೆಯಾಗಿದೆ. ಚರಿತ್ರಾತ್ಮಕ ಕೀರ್ತನೆಗಳು, ಯುದ್ಧ, ಯುದ್ಧದ ಪ್ರಸ್ತಾಪವಿರುವ ಕೀರ್ತನೆ ನೀಡಿ ವಿವೇಚಿಸಿದ್ದಾರೆ. ಶಿವಪರ ನಿಲುವು, ಕನಕದಾಸರು, ದಾಸರಾಗುವ ಮುನ್ನ ರಚಿಸಿದ ಹಾಡು ಮುಂತಾದವುಗಳನ್ನು ಸೋದಾಹರಣವಾಗಿ ಚರ್ಚಿಸಿದ್ದಾರೆ.

ಕಾವ್ಯ, ಹಾಡುಗಳ ರಚನಾ ಸಾಮರ್ಥ್ಯ ಹಾಗೂ ಹವ್ಯಾಸ ಕನಕ ನಾಯಕರಲ್ಲಿ ತಾರುಣ್ಯ ಕಾಲದ ಮೊದಲಿನಿಂದಲೇ ಜಾಗೃತವಾಗಿ ಇತ್ತು. ಉಪಲಬ್ಧವಾಗಿರು ಕೀರ್ತನೆಯಲ್ಲಾಗಲಿ ಕೆಲವನ್ನಾದರೂ ಅವರು ದಾಸರಾಗುವುದಕ್ಕಿಂತಲೂ ಬಹಳ ಮುಂಚೆಯೇ ರಚಿಸಿರುವ ಸಾಧ್ಯತೆಯಿದೆ. ಈ ದಿಶೆಯಲ್ಲಿ ಪರಿಶೀಲನೆ ಮಾಡಿದರೆ ಸ್ಪಷ್ಟಸುಳಿವುಗಳು ಸಿಗುತ್ತವೆ. ಕುರುಬರ ಡೊಳ್ಳಿನ ಹಾಡಿನ ಜನಪದ ದಾಟಿಯಲ್ಲಿ ರಚಿಸಿರುವಂಥ ಹಾಡು 'ದೇವಿ ನಮ್ಮ ದೇವರು ಬಂದಾರು ಬನ್ನಿರೆ ನೋಡಬನ್ನಿರೆ' ಈ ಪಲ್ಲವಿಯೊಂದಿಗೆ ಪ್ರಾರಂಭವಾಗುವ ಕೀರ್ತನೆಯನ್ನು ದಾಸರ ಹಾಡುವ ಕೀರ್ತನೆಗಳಿವೆ. ಕನಕದಾಸರು 'ನೃಸಿಂಹಸ್ತವ', 'ರಾಮಧ್ಯಾನ ಚರಿತ್ರೆ', 'ಮೋಹನ ತರಂಗಿಣಿ', 'ನಳ ಚರಿತ್ರೆ' ಹಾಗೂ 'ಹರಿಭಕ್ತಿಸಾರ' ಐದು ಕಾವ್ಯ ರಚಿಸಿದ್ದಾರೆ. 'ನೃಸಿಂಹಸ್ತವ'ನ ಲಭಿಸಿಲ್ಲ. ಲಭ್ಯ ಕೃತಿಗಳನ್ನು ಜ್ಯೋತಿ ಹೊಸೂರ ಸ್ಥೂಲವಾಗಿ ಪರಿಚಯಿಸಿ ಅದರ ವಿಶ್ಲೇಷಣೆಯನ್ನು ಮಾಡಿದ್ದಾರೆ. 'ಕನಕದಾಸರ ಎಲ್ಲ ಕೃತಿಗಳಲ್ಲೂ ಅವರ ಒಂದಿಲ್ಲೊಂದು ಬಗೆಯ ಮಹತ್ವದ ವಿಶಿಷ್ಟ ದೋರಣೆ ಅಭಿವ್ಯಕ್ತಗೊಂಡಿದೆ. ಇಂಥಹ ವಿಶಿಷ್ಟತೆಗಳನ್ನು ಹೊಂದಿರುವ ಅವರ ಎಲ್ಲ ಕೀರ್ತನೆಗಳು ಮತ್ತು ಐದು ಕಾವ್ಯಕೃತಿಗಳು ಕನ್ನಡ ಸಾಹಿತ್ಯದಲ್ಲಿ ಪ್ರಗತಿಶೀಲತೆ ಒಳಗೊಂಡವುಗಳೆಂಬ ಖ್ಯಾತಿ ಗಳಿಸಿಸುತ್ತವೆ. ಹೀಗಾಗಿ ಅವುಗಳ ಕೃರ್ತೃ ಕನಕದಾಸರು ವಿಭಿನ್ನ ನೆಲೆಯ ಹರಿದಾಸರೆಂದೂ ಮತ್ತು ಪ್ರಗತಿಶೀಲ ದೋರಣೆಯ ಕವಿಯೊಂದು ಪರಿಗಣನೆಗೊಳ್ಳುತ್ತಾರೆ"[೩೮] ಎಂದಿರುವುದು ಸಮಂಜಸವಾಗಿದೆ.

ಕನಕದಾಸರು ಕ್ರಿ.ಶ. ೧೫೩೮ ರ ಸುಮಾರಿಗೆ ದೈವಾಧೀನರಾದರು. ಅಂದರೆ ಸುಮಾರು ತೊಂಭತ್ತು ವರ್ಷಗಳಷ್ಟು ದೀರ್ಘವಾಗಿ ಬದುಕಿನ ಮಹಾತ್ಮರೆಂದು, ಅವರ ಜೀವನ ಸಾರ್ಥಕವಾಗಿದ್ದು ಆದರ್ಶ ಪುರುಷರಾಗಿದ್ದರು. ಅವರು ಕವಿಯಾಗಿದ್ದಾರೆ. ಮಹಾನುಭವರಾಗಿದ್ದಾರೆ. ಹೊಸೂರರ ಓದು ಅಧ್ಯಯನ ಚಿಂತನೆ. ಈ ಕೃತಿಯಲ್ಲಿ ಹರಳುಗಟ್ಟಿದೆ. ಹೀಗೆ ಜ್ಯೋತಿ ಹೊಸೂರ ಅವರ ರಚಿಸಿದ ಮೂರು ಜೀವನ ಚರಿತ್ರೆ ಹಾಗೂ ಒಂದು ವ್ಯಕ್ತಿ ಚಿತ್ರ ಮೌಲಿಕವಾಗಿ ಮೂಡಿಬಂದಿವೆ. ವೈವಿಧ್ಯಮಯವಾಗಿವೆ. ವಿಶಿಷ್ಟ ರೀತಿಯಲ್ಲಿವೆ. ಬರವಣಿಗೆ ಕ್ರಮ, ನಿರುಪಣಾಶೈಲಿ, ವಿಷಯ ವಿಂಗಡಣೆ, ಸಾಧನೆಗಳ

ಮೌಲ್ಯಮಾಪನ ಎಲ್ಲವೂ ಒಂದು ಕೃತಿಯಂತೆ ಮತ್ತೊಂದು ಇಲ್ಲ. ಒಂದಕ್ಕಿಂತ ಒಂದು ಬೇರೆಯಾಗಿದ್ದರೂ ಆಕರ್ಷಕವಾಗಿವೆ. ವೈವಿಧ್ಯತೆಯಿಂದಲೇ ಗಮನಾರ್ಹವಾಗಿವೆ.

**ಡೊಳ್ಳಿನ ಹಾಡುಗಳ ಸಮೀಕ್ಷೆ:**

'ಕಾಲಗತಿ' ಪ್ರಕಾಶನದ ಜಾನಪದ ಮಂಟಪ'ದ ಕೊಡುಗೆಯಾಗಿ ೨೦೦೩ ರಲ್ಲಿ ಪ್ರಕಟವಾದ ಪುಸ್ತಕವಿದು. ಡೊಳ್ಳಿನ ಹಾಡುಗಳ ಕುರಿತಾಗಿ ಪ್ರೊ.ಜ್ಯೋತಿ ಹೊಸೂರ ಅವರು ಸುಧೀರ್ಘ ಕಾಲದಿಂದ ಅಧ್ಯಯನ ಕೈಗೊಂಡಿದ್ದರು. ಇದೇ ವಿಷಯವಾಗಿ ಪಿ.ಎಚ್.ಡಿ. ಗೆ ನೊಂದಾಯಿಸಿದ್ದರು. ಆದರೆ ಅದು ಕೆಲವೊಂದು ಕಾರಣಗಳಿಂದ ಪೂರ್ಣಗೊಳ್ಳಲಿಲ್ಲ.

ಡೊಳ್ಳಿನ ಹಾಡುಗಳನ್ನು ಕುರಿತು ಒಂದೆಡೆ ಈ ರೀತಿ ಹೇಳುತ್ತಾರೆ. "ಬಾಲ್ಯದಿಂದಲೂ ನಾನು ಡೊಳ್ಳಿನ ಹಾಡುಗಾರರ ಮತ್ತು ಹಾಡುಗಳ ಸಂಪರ್ಕ ಹೊಂದಿದ್ದೇನೆ. ಹೀಗಾಗಿ ಸುಮಾರು ಅರವತ್ತು ವರ್ಷಗಳ ದೀರ್ಘ ಅವಧಿಯಲ್ಲಿ ಡೊಳ್ಳಿನ ಹಾಡುಗಳ ಬಗೆಗಿನ ಆಸಕ್ತಿ ನನ್ನಲ್ಲಿ ಬೆಳೆಯುತ್ತಲೇ ಬಂದಿದೆ. ಈ ದೀರ್ಘ ಅವಧಿಯಲ್ಲಿ ಅನೇಕ ಸಲ ರಾತ್ರಿಯಿಡೀ ಡೊಳ್ಳಿನ ಹಾಡುಗಾರರ ಮೇಳದಲ್ಲಿ ಅವರ ವಾಲಗಗಳ ಸಮಾವೇಶದಲ್ಲಿ ಭಾಗವಹಿಸಿದ್ದೇನೆ. ಅಲ್ಲಿಯ ವಿವಿಧ ವಿದ್ಯಾಮಾನಗಳನ್ನು ಅಮೂಲಾಗ್ರವಾಗಿ ಗ್ರಹಿಸಿದ್ದೇನೆ. ಅವುಗಳನ್ನು ಕುರಿತು ಮನದಲ್ಲಿ ಚಿಂತನ ಮಂಥನ ಮಾಡಿದ್ದೇನೆ. ನನ್ನ ಪ್ರವೃತ್ತಿಯ ಕಾರಣದಿಂದಾಗಿ ಕನ್ನಡ ಭಾಷೆಯಲ್ಲಿ ಪ್ರಕಟವಾಗಿರುವ ಡೊಳ್ಳಿನ ಹಾಡುಗಳನ್ನು ಆಸಕ್ತಿಯಿಂದ ಸಂಗ್ರಹಿಸಿಲು ಪ್ರಯುತ್ನಿಸಿದ್ದೇನೆ."[೩೯] ಎಂದು ಪೀಠಿಕೆಯಲ್ಲಿ ಹೇಳಿದ ಮಾತು ಗಮನಾರ್ಹವಾಗಿದೆ.

ಡೊಳ್ಳಿನ ಹಾಡುಗಳಿಗೆ ಸಂಬಂಧಿಸಿದ ಗ್ರಂಥ ಸಂಗ್ರಹ, ಹಾಡನ್ನು ಸಂಗ್ರಹಿಸಿರುವ ಶ್ರೀಯುತರು ಇದೀಗ "ನನ್ನ ಅವಲೋಕನ ಮತ್ತು ಅಧ್ಯಾಯನದ ಫಲಿತವಾಗಿ 'ಡೊಳ್ಳಿನ ಹಾಡುಗಳ ಸಮೀಕ್ಷೆ' ಹೆಸರಿನಿಂದ ಒಂದು ಚಿಕ್ಕ ಕೃತಿಯನ್ನು ಬೆಳಕಿಗೆ ತರುತ್ತಲಿದ್ದೇನೆ. ಪ್ರಸ್ತುತ ಕೃತಿಯ ೧೯೯೦ ನೆ ಯ ವರ್ಷದವರೆಗಿನ ಅವಧಿಯಲ್ಲಿ ಕನ್ನಡದಲ್ಲಿ ಪ್ರಕಟಿಗೊಂಡ ಎಲ್ಲ ಬಗೆಯ ಡೊಳ್ಳಿನ ಹಾಡುಗಳ ಮತ್ತು ಡೊಳ್ಳಿನ ಹಾಡುಗಳನ್ನು ಕುರಿತಂತೆ ಪ್ರಕಟಗೊಂಡ ಬರಹಗಳ ಒಂದು ಸಮಗ್ರ ಸಮೀಕ್ಷೆಯಾಗಬೇಕೆಂಬುದಾಗಿ ಪ್ರಯತ್ನಸಿದ್ದೇನೆ".[೪೦] ಎಂದು ಹೇಳಿದ್ದಾರೆ. ನನ್ನ ಗಮನಕ್ಕೆ ಬಾರದ ಪ್ರಕಟಿತ ಡೊಳ್ಳಿನ ಹಾಡುಗಳಾಗಲಿ, ಅವುಗಳನ್ನು ಕುರಿತಂತೆ ಪ್ರಕಟವಾಗಿರಬಹುದಾದ ಬರೆಹಗಳಾಗಲಿ, ಅಪ್ಪಿತಪ್ಪಿ ಸಮೀಕ್ಷಿಸದೆ ಉಳಿದಿರುವ ಸಾಧ್ಯತೆ ಇದ್ದೆ ಇದೆ. ಒಂದು ವೇಳೆ ಹಾಗೆ ಉಳಿದಂತೆ ಪ್ರಕಟಿತ ಡೊಳ್ಳಿನ ಹಾಡು ಅಥವಾ ಡೊಳ್ಳಿನ ಹಾಡುಗಳನ್ನ ಕುರಿತು ಬರಹಗಳ ಬಗ್ಗೆ ನನಗೆ ತಿಳಿಸದರೆ, ಕೃತಜ್ಞತೆಗಳೊಂದಿಗೆ ಸ್ವೀಕಾರ ಮಾಡಿ, ಮುಂದೆ ಅವುಗಳನ್ನು ಸಮೀಕ್ಷೆಗೆ ಅಳವಡಿಸಲಾಗುವುದೆಂದು ಹೇಳಿದ್ದು ಸೌಜನ್ಯಕ್ಕೆ ನಿದರ್ಶನವಾಗಿದೆ. ವಿದ್ವತ್ತಿಗೆ ವಿನಯವೇ

ಭೂಷಣವೆಂಬುದಕ್ಕೆ ಕುಂದಣವಿಟ್ಟಂತಾಗಿದೆ.

ಡೊಳ್ಳಿನ ಹಾಡುಗಳ ಸಾಂಸ್ಕೃತಿಕ ಹಿನ್ನೆಲೆ, ಡೊಳ್ಳಿನಹಾಡುಗಳ ಜಾನಪದ ನೆಲೆ, ಜನಪದ ಹಾಡುಗಳೊಂದಿಗೆ ಡೊಳ್ಳಿನ ಹಾಡುಗಳುಳ್ಳ ಪ್ರಕಟಣೆಗಳು, ಸಂಪೂರ್ಣ ಡೊಳ್ಳಿನ ಹಾಡುಗಳುಳ್ಳ ಪ್ರಕಟಣೆಗಳು, ಡೊಳ್ಳಿನ ಹಾಡುಗಳ ಕುರಿತು ಬರೆಹಗಳ ಪರಿಶೀಲನೆ ಹೀಗೆ ಒಟ್ಟು ಐದು ಮೌಲಿಕ ಲೇಖನಗಳು ಇದರಲ್ಲಿವೆ.

'ಡೊಳ್ಳಿನ ಹಾಡುಗಳು ಸಾಂಸ್ಕೃತಿಕ ಹಿನ್ನೆಲೆ'ಯೆಂಬ ಲೇಖನವು ಅತ್ಯಮೂಲ್ಯವಾಗಿದೆ ಡೊಳ್ಳಿನ ಪದಗಳು ಅದರ ಸ್ವರೂಪ, ಹಾಡುವ ರೀತಿ, ಮುಂತಾದ ಎಲ್ಲ ಹಂತದ ಸಾಂಸ್ಕೃತಿಕ ಹಿನ್ನೆಲೆಯನ್ನು ಇದರಲ್ಲಿ ಅನಾವರಣಗೊಳಸಿದ್ದಾರೆ. ಐತಿಹಾಸಿಕವಾಗಿ ತುಂಬ ಮಹತ್ವದ ಲೇಖನವಿದು. ಅಗ್ಗದ ಜನಪ್ರಿಯತೆಗೆ ಮರಳಾಗಿ, ತಪ್ಪು ಗ್ರಹಿಕೆಗಳಿಗೆ ಪಕ್ಕಾಗಿ ಸಾಂಸ್ಕೃತಿಕ ಸತ್ತ್ವಗಳ ಅಪಮೌಲ್ಯದಲ್ಲಿ ತೊಡಗಿದ್ದುದನ್ನು ಅಭ್ಯಾಸಿಸಿ ಜಿಜ್ಞಾಸುಗಳು ಗುರುತಿಸಬಹುದಾಗಿದೆ. ಈ ದಿಸೆಯಲ್ಲಿ ಸರಿಯಾದ ಅಧ್ಯಯನ ಕಾರ್ಯವು ಬೇಗನೆ ಪ್ರಾರಂಭವಾಗುವುದು. ಅತ್ಯಗತ್ಯವೆಂದು ಪ್ರತಿಪಾದಿಸಿದ್ದಾರೆ. "ಡೊಳ್ಳಿನ ಹಾಡುಗಳ ಜಾನಪದ ನೆಲೆಯನ್ನು ಮೊದಲಿಗೆ ಪರಿಚಯಿಸವ ಪ್ರಯತ್ನ ಮಾಡಲಾಗಿದೆ".[೪೧] ಎಂಬುದು ಗಮನಾರ್ಹವಾಗಿದೆ.

'ಡೊಳ್ಳಿನ ಹಾಡುಗಳ ಜಾನಪದ ನೆಲೆ' ಯು ಪ್ರಸ್ತುತ ಕೃತಿಯ ಎರಡನೆಯ ಲೇಖನವಾಗಿದೆ. ಇದರಲ್ಲಿ ಹತ್ತು ಹಲವು ಅಂಶ ಜಿಜ್ಞಾಸೆಗೊಳಗಾಗಿವೆ. ಹಲವು ವಿದ್ವಾಂಸರು ಹೇಳಿಕೆಗಳು ಚರ್ಚೆಗೊಳಪಟ್ಟಿವೆ. ದೇಶಿಯ ರಾಷ್ಟ್ರೀಯ, ಅಂತರರಾಷ್ಟ್ರೀಯ ಜಾನಪದ ವಿದ್ವಾಂಸರ ಅಭಿಪ್ರಾಯಗಳು ಈ ಲೇಖನದಲ್ಲಿ ಪ್ರಸ್ತಾಪಗೊಂಡಿರುವುದು. ಶ್ರೀಯುತರ ಅಧ್ಯಯನ ಆಳ ಮತ್ತು ಎತ್ತರ ಬಿತ್ತರಗಳನ್ನು ಸಾಕ್ಷೀಕರಿಸುತ್ತದೆ.

ಜನಪದ ಪದ್ಯಸಾಹಿತ್ಯವನ್ನು ಇಲ್ಲಿ ಜಿಜ್ಞಾಸೆಗೆ ಒಳಪಡಿಸಲಾಗಿದೆ. ಹಾಡುಗಳ ಹುಟ್ಟು, ಅವುಗಳಿಗೆ ಕರೆಯುವ ಹೆಸರು, ಅದಕ್ಕೆ ಕಾರಣ ಅದರ ಹಿಂದಿನ ಅರ್ಥ ಎಲ್ಲವನ್ನು ಇದರಲ್ಲಿ ಪರಿಚಯಿಸಿದ್ದಾರೆ. "ಕನ್ನಡ ಜನಪದ ಹಾಡುಗಳಲ್ಲಿ ವಾದ್ಯದ ಹಿನ್ನೆಲೆಯಿಂದಾಗಿ ಹೆಸರು ಹೊಂದಿರುವ ಮೂರ್‍ನಾಲ್ಕು ಸಂಪ್ರದಾಯಗಳ ಹೆಚ್ಚಿನ ಪ್ರಸಿದ್ಧಿ ಹೊಂದಿದೆ. ಈ ವಾದ್ಯ ಹಿನ್ನೆಲೆಯ ಗರ್ಭದಿಂದಲೇ ಡೊಳ್ಳಿನ ಹಾಡುಗಳ ಸಂಪ್ರದಾಯ ಪ್ರಾದುರ್ಭವಿಸಿದೆ. ಮತ್ತು ಪ್ರಖ್ಯಾತವಾಗಿದೆ. ಜನಾಂಗೀಯ ಪ್ರತ್ಯೆಕತೆ, ದೇವತಾರಾಧನೆಯ ಅವಿಭಾಜ್ಯತೆ ಗೋಷ್ಠಿಯ ಸಹಜತೆ ಮತ್ತು ನಿರೂಪಣೆಯ ಸರಳತೆ ಇವೇ ಮುಂತಾದ ಕಾರಣಗಳಿಂದಾಗಿ ಡೊಳ್ಳಿನ ಹಾಡುಗಳು ವೈಶಿಷ್ಟ್ಯ ಪೂರ್ಣವಾಗಿದೆ. ಅಭ್ಯಾಸ ಯೋಗ್ಯವೂ ಕೂಡ ಆಗಿವೆ."[೪೨] ಈ ಮಾತುಗಳು ಶ್ರೀಯುತರಿಗಿರುವ ಅಧಿಕೃತೆಯನ್ನು ಸಾದರಪಡಿಸುತ್ತವೆ.

'ಈ ಡೊಳ್ಳಿನ ಹಾಡುಗಳ ಮೇಳದಲ್ಲಿ ವಾದನ, ಹಾವಭಾವ ಮುಂತಾದ ಕ್ರಿಯೆಗಳೂ ಅವಿಭಾಜ್ಯ ಅಂಗಗಳಾಗಿರುವುದರಿಂದ ಜನಪದ ಕ್ರಿಯಾ ವಿಭಾಗದಲ್ಲೂ ಇವು ಒಳಗೊಳ್ಳುತ್ತವೆ.

ಈ ಹಿನ್ನೆಲೆಯಿಂದ ನೋಡಿದಾಗ ಜನಪದ ವಾಙ್ಮಯ ಮತ್ತು ಜನಪದ ಕ್ರಿಯಾ ಇವೆರಡರ ಸಂಯುಕ್ತ ವಿಭಾಗದಲ್ಲಿ ಸೇರ್ಪಡೆಗೊಳ್ಳುವ ಅಂಶ ಮನದಲ್ಲಿಟ್ಟುಕೊಂಡು ಈ ಡೊಳ್ಳಿನ ಹಾಡುಗಳ ಅಧ್ಯಯನ ಮಾಡಬೇಕಾಗುತ್ತದೆ'. ಎಂಬ ಸೂಚನೆಯು ಮೌಲಿಕವಾಗಿದೆ. ಮುಂದೆ ಅಧ್ಯಯನ ಕೈಗೊಳ್ಳುವವರಿಗೆ ಮಾರ್ಗದರ್ಶಿ ಸೂತ್ರವಾಗಿದೆ. ಇವರೆಡು ಲೇಖನಗಳು ಅತ್ಯಮೂಲ್ಯವಾಗಿವೆ. ಕನ್ನಡದಲ್ಲಿ ಪ್ರಕಟವಾದ ಪ್ರಪ್ರಥಮ ಬರಹಗಳಿವು.

'ಜನಪದ ಹಾಡುಗಳೊಂದಿಗೆ ಡೊಳ್ಳಿನ ಹಾಡುಗಳುಳ್ಳ ಪ್ರಕಟನೆಗಳು' ಇದು ಮೂರನೆಯ ಲೇಖನವಾಗಿದೆ. ೧೯೫೩ ರಲ್ಲಿ ಪ್ರಕಟವಾದ ಪಂಚಮುಖಿಯವರ 'ಕರ್ನಾಟಕ ಜಾನಪದ ಗೀತೆಗಳು' ಮೊದಲುಗೊಂಡು, ಡಾ. ನಿಂಗಣ್ಣ ಸಣ್ಣಕ್ಕಿ, ಶ್ರೀ ಶಿವಲಿಂಗಪ್ಪ ಭಾವಿಕಟ್ಟಿ, ಕೆ.ವಿರೂಪಾಕ್ಷಗೌಡ, ಜಿ.ವಿ. ಖಾಡೆ, ಗುರುಮೂರ್ತಿ ಪೆಂಡಕೂರ, ಎ.ಜಿ. ನೀಲಗಾರ ಮುಂತಾದವರ ಪ್ರಕಟಣೆಗಳನ್ನು ಆಳವಾಗಿ ಅಧ್ಯಯನಿಸಿ ಸಮೀಕ್ಷೆ ಕೈಕೊಂಡಿದ್ದಾರೆ. 'ಇಲ್ಲಿಯ ಡೊಳ್ಳಿನ ಹಾಡುಗಳ ಸಂಗ್ರಹ ಕ್ರಮದಲ್ಲಿಯ ವಿಷಯದ ಆಯ್ಕೆ ಬಗ್ಗೆ ಮೆಚ್ಚುಗೆ ಸೂಚಿಸುವುದು ಅತ್ಯಗತ್ಯ ಸೌಜನ್ಯ ಮತ್ತೊಂದೆಡೆ, 'ಅರ್ಧಮರ್ಧ ಹಾಡುಗಳ ಕೆಲವು ಇವೆ ಹಾಡುಗಳ ಸಂಗ್ರಹ ಕಾರ್ಯದಲ್ಲಿ ಯಾವುದೇ ಬಗೆಯ ಕ್ರಮ ಇಲ್ಲಿ ಆರಂಭ, ಮುಕ್ತಾಯ ಬಗೆಗೆ ಕಾಳಜಿವಹಿಸಿಲ್ಲ'. ಎಂಬ ನೇರ ನುಡಿಯನ್ನು ಕಾಣಬಹುದು. ಚೆನ್ನಾಗಿರುವುದನ್ನು ಪ್ರಶಂಸಿಸುವುದು. ಕೊರತೆಯನ್ನು ಎತ್ತಿ ಹೇಳುವ ಪ್ರವೃತ್ತಿ ಗುಣ ಗ್ರಾಹಿತ್ವ'ವನ್ನು ಗುರುತಿಸಬಹುದು, ಇದರಲ್ಲಿ ಮುಖ್ಯವಾಗಿ ಒಂದೇ, ಎರಡೋ ಕೆಲವು ಡೊಳ್ಳಿನ ಹಾಡುಗಳನ್ನು ಸಂಗ್ರಹಿಸಿದವರ ಕೃತಿಯ ಅವಲೋಕನವಾಗಿದೆ ಅದರ ಮುಂದಿನ ಲೇಖನವೇ.

'ಸಂಪೂರ್ಣ ಡೊಳ್ಳಿನ ಹಾಡುಗಳುಳ್ಳ ಪ್ರಕಟಣೆಗಳು' ಆಗಿದೆ. ಇದು ಹೊಸೂರರ ವಿಸ್ತೃತ ಅಧ್ಯಯನಕ್ಕೆ ಕನ್ನಡಿಯಾಗಿದೆ. ಡಾ. ಬಸವರಾಜ ನೆಲ್ಲಿಸರ, ಡಾ. ಜೀಶಂಪ, ಡಾ. ಸುಂಕಾಪೂರ, ಡಾ. ಎಚ್.ಎಲ್. ನಾಗೇಗೌಡ, ಬಸನಗೌಡ ಪಾಟೀಲ, ಕೆ. ವಿರೂಪಾಕ್ಷಗೌಡ ಮುಂತಾದವರು ಡೊಳ್ಳಿನ ಹಾಡುಗಳ ಪ್ರಕಟಣೆಗಳ ಅಧ್ಯಯನವಿದು. ಈ ಲೇಖನದ ಮುಂದುವರಕೆಯಾಗಿ, ಡೊಳ್ಳಿನ ಹಾಡುಗಳ ಕುರಿತು ಬರಹಗಳ ಪರಿಶೀಲನೆಯಿದೆ. ಈ ಹಿಂದಿನ ಲೇಖನದಲ್ಲಿ ಗ್ರಂಥಗಳ ಸಮೀಕ್ಷೆ ಮಾಡಿದ್ದಾರೆ, ಇದರಲ್ಲಿ ಲೇಖನಗಳ ಸಮೀಕ್ಷೆಯಿದೆ. ಹೀಗೆ ಒಂದು ವ್ಯವಸ್ಥಿತ ಕ್ರಮ, ಅಚ್ಚುಕಟ್ಟುತನ ಶಾಸ್ತ್ರೀಯ ಶಿಸ್ತು, ವೈಜ್ಞಾನಿಕ ಕ್ರಮವಿದು. ಅನುಬಂಧ, ಒಂದರಲ್ಲಿ ಜನಪದ ಹಾಡುಗಳೊಂದಿಗೆ ಡೊಳ್ಳಿನ ಹಾಡುಗಳುಳ್ಳ ಕೃತಿಗಳ ಸೂಚಿ ಅನುಬಂದ ಎರಡರಲ್ಲಿ ಸಂಪೂರ್ಣ ಡೊಳ್ಳಿನ ಹಾಡುಗಳುಳ್ಳ ಕೃತಿಗಳ ಸೂಚಿಯಿದ್ದರೆ, ಅನುಬಂಧ ಮೂರರಲ್ಲಿ ಸಂತೆ ಜಾತ್ರೆಗಳ ಸಲುವಾಗಿ ಡೊಳ್ಳಿನ ಹಾಡುಗಳ ಜನಪ್ರೀಯ ಪ್ರಕಟನೆಗಳ ಸೂಚಿಯನ್ನು ನೀಡಿದ್ದಾರೆ. 'ನಿರ್ದಿಷ್ಟಕಾಲ

ಘಟ್ಟದೊಳಗೆ ಕನ್ನಡದಲ್ಲಿ ಪ್ರಕಟವಾಗಿರುವ ಡೊಳ್ಳಿನ ಹಾಡುಗಳ ಸಮಗ್ರ ಸಮೀಕ್ಷೆಯ ಮೊಟ್ಟ ಮೊದಲನೆಯ ಪ್ರಯತ್ನವನ್ನು ಪ್ರಸ್ತುತ ಕೃತಿ ಮೂಲಕ ಮಾಡಲಾಗಿದೆ' ಎಂಬುದು ಶ್ಲಾಘನೀಯವಾಗಿದೆ.

ಇಲ್ಲಿಯವರೆಗೆ ಪ್ರಕಟವಾಗಿರುವ ಡೊಳ್ಳಿನ ಹಾಡುಗಳ ಕಾರ್ಯದಲ್ಲಿ ಮತ್ತು ಡೊಳ್ಳಿನ ಹಾಡುಗಳನ್ನು ಕುರಿತು ವಿವಿದ ಬಗೆಯ ಬರಹಗಳಲ್ಲಿ ಬಹಳಷ್ಟು ದೋಷಗಳು ಹಾಗೂ ಕೊರತೆಗಳು ಇದ್ದುದುಂಟು. ಹೀಗಾಗಲು ಡೊಳ್ಳಿನ ಹಾಡುಗಾರರ ಮತ್ತು ಹಾಡುಗಾರರ ಪರಂಪರೆ ಸಂಪ್ರದಾಯಗಳ ಗಾಢ ಸಂಪರ್ಕ ಹಾಗೂ ತಿಳುವಳಿಕೆಯಿಲ್ಲದವರು ಆ ಕಾರ್ಯಮಾಡಿದುದೇ ಮುಖ್ಯಕಾರಣ' ವೆಂದಿರುವುದು ವಿಷಯ ಗಾಂಭೀರ್ಯತೆಯ ಸಂಕೇತವಾಗಿದೆ. ಮತ್ತೊಂದೆಡೆ 'ಅವಕಾಶ ಮಾಡಿಕೊಂಡು 'ಡೊಳ್ಳಿನ ಹಾಡುಗಳ ಸಮೀಕ್ಷೆಯ ಮುನ್ನಡೆ' ಶೀರ್ಷಿಕೆಯಿಂದ ಇನ್ನೊಂದು ಕೃತಿ ಪ್ರಕಟಿಸಿ ಅದರಲ್ಲಿ ೧೯೯೦ ರ ನಂತರ ಕಾಲಾವಧಿಯಲ್ಲಿ ಪ್ರಕಟಗೊಂಡ ಡೊಳ್ಳಿನ ಹಾಡುಗಳ ಮತ್ತು ಅವುಗಳ ಕುರಿತು ಬರಹಗಳ ಸಮೀಕ್ಷೆಯನ್ನು ಅದರಲ್ಲಿ ಒಳಪಡಿಸಬೇಕೆಂಬ ಬಲವಾದ ಬಯಕೆ ಇದೆ'. ಎಂದಿರುವುದು ಆಶಾದಾಯಕವಾಗಿದೆ. ಅದು ಈಡೇರಲಿ ಕನ್ನಡ ಸಾಹಿತ್ಯಕ್ಕೆ ವೈವಿದ್ಯತೆ, ಅಧಿಕೃತ ಪ್ರಾಪ್ತವಾಗಲಿ ಕಳೆದು ಅರವತ್ತು ವರ್ಷಗಳಿಂಡ ಸಂಕಲನಗೊಳಿಸಿದ ಡೊಳ್ಳಿನ ಹಾಡುಗಳನ್ನು ಒಂದೆಡೆ ಪ್ರಕಟಿಸುವಂತಾದರೆ ಕನ್ನಡ ಸಾಹಿತ್ಯಕ್ಕೆ ಜಾನಪದ ಲೋಕಕ್ಕೆ ಅತ್ಯಮೂಲ್ಯ ಕೊಡುಗೆಯಾಗುವುದರಲ್ಲಿ ಸಂದೇಹವಿಲ್ಲ.

"ಖ್ಯಾತ ಜಾನಪದ ಸಂಶೋಧಕರಾದ ಜ್ಯೋತಿ ಹೊಸೂರ ಅವರು ಜಾನಪದ ಸಾಹಿತ್ಯ ಮತ್ತು ಸಂಸ್ಕೃತಿಯೆ ಬಗೆಗಿನ ವಿಸ್ತಾರವಾದ ಕ್ಷೇತ್ರ ಕಾರ್ಯ ಸಂಗ್ರಹ, ಸಂಪಾದನೆ ಮತ್ತು ಪ್ರಕಟಣೆಗಳನ್ನು ಸುಮಾರು ನಲವತ್ತು ವರ್ಷಗಳಿಂದ ಅನನ್ಯ ಶ್ರದ್ಧೆಯಿಂದ ದುಡಿದಿರುವ ಮತ್ತು ಸಂಪಾದಕರಾಗಿ ಹತ್ತಾರು ಮೌಲಿಕ ಕೃತಿಗಳನ್ನು ರಚಿಸಿದ್ದಾರೆ'.[೪೩] ಡಾ. ಎಚ್.ಜೆ. ಲಕ್ಕಪ್ಪಗೌಡರ ಈ ಅಭಿಪ್ರಾಯ ಜ್ಯೋತಿ ಹೊಸೂರ ಅವರ ವಿದ್ವತ್ತಿಗೆ ಸಾಕ್ಷಿಯಾಗಿದೆ. "ಜ್ಯೋತಿಹೊಸೂರ ಅವರು ಜಾನಪದ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆ ಹೆಚ್ಚಿನದು. ಈ ಕ್ಷೇತ್ರದ ಕಾರ್ಯ ಅವರಿಂದ ವೈಜ್ಞಾನಿಕ ತಳಹದಿಯ ಮೇಲೆ ವ್ಯವಸ್ಥಿತವಾಗಿ ನಡೆದಿದೆ".[೪೪] ಕೆ.ಎನ್. ದೊಡ್ಡಮನಿಯವರ ಅಭಿಪ್ರಾಯವಾಗಿದೆ. ಇವೆರಡು ಅಭಿಪ್ರಾಯಗಳು ಪ್ರೊ. ಜ್ಯೋತಿ ಹೊಸೂರರ ಜಾನಪದ ಕ್ಷೇತ್ರದ ಕಾರ್ಯಕ್ಕೆ ಮುದ್ರೆಯೊತ್ತಿವೆ ಹೀಗಾಗಿ ಮತ್ತಷ್ಟು ಕೃತಿಗಳನ್ನು ಇವರಿಂದ ಅಪೇಕ್ಷಿಸುವುದು ಸಹಜವಾಗಿದೆ.

**ಜಾನಪದ ಉಪಾಸನೆ:**

ಜಾನಪದ ಉಪಾಸನೆಯು 'ಕಾಲಗತಿ' ಪ್ರಕಾಶನದಿಂದ ೧೯೮೧ ರಲ್ಲಿ ಪ್ರಕಟವಾದ ವಿಮರ್ಶಾ ಸಂಕಲನವಾಗಿದೆ. ಇದರಲ್ಲಿ ಕನ್ನಡ 'ಜನಪದ ಸಾಹಿತ್ಯದ ವಿಮರ್ಶಾ ಕೃಷಿ'.

'ಗ್ರಂಥಸ್ಥ ಗಾದೆಗಳು', ಕನ್ನಡದ 'ವಾಗ್ರೂಢಿಗಳು', 'ಜೇಂಗೋಡ', 'ಜನಪದ ಸಾಹಿತ್ಯದಲ್ಲಿ ದೇವ, ದೇವತಾ ಸಾಮರಸ್ಯ', 'ಜಾನಪದದಲ್ಲಿ ಸಹಕಾರ', 'ಗೊಂದಲ ಮತ್ತು ಗೊಂದಲಿಗರ ಹಿನ್ನೆಲೆ' ಮತ್ತು 'ಗೊಂದಲದಗೊಂದಲ' ಹೀಗೆ ಎಂಟು ಜಾನಪದ ವಿಷಯಕ್ಕೆ ಸಂಬಂಧಿಸಿದ ಲೇಖನಗಳಿವೆ.

"ಮೊದಲನೆ ಯ ಲೇಖನ ಕನ್ನಡ 'ಜನಪದ ಸಾಹಿತ್ಯದ ವಿಮರ್ಶಾ ಕೃಷಿ' ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದ ಕನ್ನಡ ಅಧ್ಯಯನದ ಪೀಠವು ಸಂಘಟಿಸಿದ ಅಖಿಲ ಕರ್ನಾಟಕ ಮೊಟ್ಟ ಮೊದಲ ಜಾನಪದ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧದ ಅಕ್ಷರರೂಪವಾಗಿದೆ. ಈ ಲೇಖನದಲ್ಲಿ ಪ್ರಸ್ತಾವಿಕ ಅಂಶಗಳು ಆರಂಭಕಾಲದ ಪ್ರತಿಪಾದನಾತ್ಮಕ ವಿಮರ್ಶೆ (೧೯೨೦ ರಿಂದ ೧೯೫೦) ನಡುಗಾಲದ ಪ್ರಶಂಸನಾತ್ಮಕ ವಿಮರ್ಶೆ (೧೯೫೧ –೬೫) ಹೊಸಕಾಲದ ಚಿಕಿತ್ಸಕ ವಿಮರ್ಶೆ (೧೯೬೬ ರಿಂದ ೧೯೭೩) ಮುಖ್ಯವಾಗಿ ಮೂರು ವಿಭಾಗವನ್ನು ಮಾಡಿ ಅಧ್ಯಯಿನಿಸಿದ್ದು ಶ್ಲಾಘನೀಯವಾಗಿದೆ. ಪಡೆನುಡಿ, ಗಾದೆ, ಒಗಡು, ಒಡಪು, ಕಥೆ, ರೂಪಕ, ಜನಪದಗೀತೆ, ಲಾವಣಿ, ಸಂಕೀರ್ಣ, ಇತ್ಯಾದಿ ಕಿರು, ಉಪ ಶಿರ್ಷಿಕೆಗಳಡಿಯಲ್ಲಿ ವಿಷಯ ಮಂಡಿಸಲಾಗಿದೆ. ಈ ಕೃತಿಯ ಅತ್ಯಂತ ಮೂಲ ಲೇಖನವಿದು, ಶಿಷ್ಟ ಸಾಹಿತ್ಯಚರಿತ್ರೆಯಲ್ಲಿ ನವೋದಯ, ನವ್ಯ, ದಲಿತ ಬಂಡಾಯ, ಪಂಥದ ವಿಮರ್ಶಾ ಪಥವನ್ನು ಗುರುಸಿದಂತೆಯೇ ಜಾನ ಪದದಲ್ಲಿ ಜ್ಯೋತಿ ಹೊಸೂರ ಅವರ ಶಾಸ್ತ್ರೀಯವಾಗಿ ಅಧ್ಯಯನ ಕೈಕೊಂಡಿರುವುದು ಕಾಲ ಘಟ್ಟವಾಗಿ ವಿಂಗಡಿಸಿರುವುದು. ಅತ್ಯಂತ ಪ್ರಸ್ತುತವಾಗಿದೆ. ಪ್ರಸ್ತುತ ಕೃತಿಯು ೧೯೮೧ ರಲ್ಲಿ ಪ್ರಕಟವಾಗಿದ್ದು, ಈ ಲೇಖನ ಅದಕ್ಕೂ ಮುಂಚೆ ಮಂಡನಗೊಂಡಿದೆ. ಈ ಹಿನ್ನೆಲೆಯನ್ನು ಅವಲೋಕಿಸಿದಾಗ ಇದರ ಮೌಲ್ಯ ಹೆಚ್ಚಳವಾಗುತ್ತದೆ.

'ಗ್ರಂಥಸ್ಥ ಗಾದೆಗಳು', ಕನ್ನಡದ 'ವಾಗ್ರೂಢಿಗಳು' ಮತ್ತು 'ಜೇಂಗೋಡ' ಇವು ಕರ್ನಾಟಕ ವಿಶ್ವವಿದ್ಯಾಲಯ ಹೊರಡಿಸುವ 'ಕರ್ನಾಟಕ ಭಾರತಿ' ತ್ರೈಮಾಸಿಕ ಪತ್ರಿಕೆಯಲ್ಲಿ ಪ್ರಕಟವಾದ ವಿಮರ್ಶೆ ಲೇಖನಗಳು 'ಗ್ರಂಥಸ್ಥ ಗಾದೆಗಳು', ಶ್ರೀ ಎಚ್.ಎಸ್. ಅಚ್ಚಪ್ಪ ಅವರು ಹೊರತಂದಿರುವ ದೊಡ್ಡಗಾತ್ರದ ಗ್ರಂಥದ ಪರಿಚಯಿಸುವ ಲೇಖನ ಒಂಭತ್ತನೆ ಯ ಶತಮಾನದ ಕವಿರಾಜಮಾರ್ಗದಿಂದ ಮೊದಲುಗೊಂಡು ೨೦ನೆಯ ಶತಮಾನದ ಮುದ್ದಣನವರೆಗಿನ ವ್ಯಾಪ್ತಿಯ ಸುಮಾರು ೧೨೦ ಪ್ರಮುಖ ಕವಿಗಳ ಸುಮಾರು ೧೬೫ ಶ್ರೇಷ್ಠ ಕೃತಿಗಳ ಅಧ್ಯಯನಗೈದು ೧೦,೦೦೦ ಗಾದೆಗಳನ್ನು ಹೆಕ್ಕಿ ತೆಗೆದು ಸಂಪಾದಿಸಿದ ಗ್ರಂಥ ಅದನ್ನು ಪರಿಚಯಿಸುವ ಲೇಖನವಿದು.

'ಕನ್ನಡ ವಾಗ್ರೂಡಿಗಳು' ಪ್ರೊ. ಎಂ.ರಾಜಗೋಪಾಲಾಚಾರ್ಯ ಸಂಪಾದಿಸಿದ ೧೯೭೦ ರಲ್ಲಿ ಪ್ರಕಟವಾದ ಕೃತಿ ಅದನ್ನು ಶ್ರೀಯತರು ಈ ಲೋಕದಲ್ಲಿ ಪರಿಚಯಿಸಿದ್ದಾರೆ. 'ಅಷ್ಟಿಷ್ಟು ಲೋಪದೋಷಗಳು ಉಳಿದಿದ್ದರೂ ಶ್ರೀಯುತರು ಶ್ರದ್ಧಾಪೂರ್ಣತೆಯನ್ನು

ನಾವು ಶ್ಲಾಘಿಸಬೇಕು ಲೋಪದೋಷಗಳು ಕೃತಿ ಮೌಲ್ಯವನ್ನೇ ಕಡಿಮೆ ಮಾಡುವಂಥವು ಅಲ್ಲವೆಂಬುದು ಮುಖ್ಯ'. ಎಂಬ ತೂಕದ ಮಾತುಗಳನ್ನು ಹೇಳಿದ್ದಾರೆ. ಮುಂದವರೆದು, ಪ್ರೊ. ಎಂ. ರಾಜಗೋಪಾಲಚಾರ್ಯ ಕನ್ನಡಕ್ಕೆ ಅವಶ್ಯಕಬೇಕಾದ ಕಾರ್ಯವೊಂದನ್ನು ಮಾಡಿದ್ದಾರೆ. ಆ ಮೂಲಕ ಕನ್ನಡಕ್ಕಾಗಿ ದುಡಿಯಬೇಕೆನ್ನುವವರಿಗೆ ಹೊಸ ಹಾದಿಯೊಂದನ್ನು ತೋರಿಸಿಕೊಟ್ಟಿದ್ದಾರೆ. ಕನ್ನಡಿಗರ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಶ್ರೀಯುತ ಈ ಕಾರ್ಯವನ್ನು ಹಲವರಿಗೆ ಪ್ರೇರಣೆ ನೀಡಲೆಂದು ಹಾರೈಸುವೆ ಎಂಬುದು ವಿಮರ್ಶೆಯ ಪರಿಭಾಷೆಗೆ ಅನುಗಣವಾಗಿಯೇ ಇದೆ.

'ಜೇಂಗೊಡ'ವು ಎನ್.ಆರ್. ನಾಯಕರು, ಸಂಪಾದಿಸಿದ ಗ್ರಂಥ ಇದರ ಪರಿಚಯಾತ್ಮಕ ಲೇಖನವಿದು. 'ಒಂದು ನಿರ್ದಿಷ್ಟ ಪ್ರದೇಶದಲ್ಲಿಯ ವಿಶಿಷ್ಟ ಜನಾಂಗವೊಂದರ ಪರಂಪರಾಗತ ಜನಪದ ಹಾಡುಗಳನ್ನು ಸಂಗ್ರಹಿಸಿ ಕೊಡುವ ಹೊಸತನ ಇಲ್ಲಿದೆ. ಪಾಠಾಂತರಗಳನ್ನು ಕೊಡುವ ಮತ್ತು ಆಡುನುಡಿಯನ್ನು ಲಿಪಿಬದ್ಧಗೊಳಿಸುವ ರೀತಿಯಲ್ಲೂ ತರುವ ಪ್ರಯತ್ನ ನಡೆದಿದೆ. ಹೊಸತನದ ಪ್ರಜ್ಞೆಗಾಗಿ ಪ್ರಯತ್ನಗಳಿಗಾಗಿ ಜೋಂಗೊಡವನ್ನು ಸ್ವಾಗತಿಸಬೇಕಾಗಿದೆ' ಎಂದಿರುವುದು ಶ್ಲಾಘನೀಯವಾಗಿದೆ.

'ಜನಪದ ಸಾಹಿತ್ಯದಲ್ಲಿ ದೇವದೇವತಾ ಸಾಮರಸ್ಯ' ಮತ್ತು 'ಜಾನಪದದಲ್ಲಿ ಸಹಕಾರ' ಇವರೆಡೂ ಸಂಭಾವನಾ ಗ್ರಂಥಗಳಿಗಾಗಿ ಬರೆದ ಲೇಖನಗಳಾಗಿವೆ. "ದೇವರು ಮತ್ತು ಜನಸಾಮಾನ್ಯರ ಜನಪದರ ಜೀವನ ಅವಿಭಾಜ್ಯ ಒಂದನ್ನು ಬಿಟ್ಟು ಬಂದಿಲ್ಲ. ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ, ಹುಟ್ಟಿನಿಂದ ಸಾಯುವವರೆಗೆ ಹೆಜ್ಜೆ ಹೆಜ್ಜೆಗೆ ಅವರಿಗೆ ದೇವರು ಬೇಕು. ಸೃಷ್ಠಿಯ ಸಕಲ ವ್ಯಾಪಾರಗಳಲ್ಲೂ ದೇವರನ್ನು ಕಾಣುವ ಮನೋ ವೈಶಾಲ್ಯ ಹಳ್ಳಿಗರದು"[೪೫]

'ಗಂಡಸರು ರೆಂಟೆ, ಕುಂಟಿ ಹೊಡೆಯುವಾಗ ಹೆಂಗಸರು ಕುಟ್ಟು, ಬೀಸುವಾಗ, ಯವುದೇ ಬಗೆಯ ಭೇದ ಭಾವವಿಲ್ಲದೆ ಎಲ್ಲ ದೇವರನ್ನು ಸಮಾನ ಭಕ್ತಿಯಿಂದ ಸ್ಮರಿಸುವರು"[೪೬] ಹಲಸಂಗಿ ಲಾವಣಿಕಾರ ಖಾಜಾ ಸಾಹೇಬರು "ಅಲ್ಲಾ ಮತ್ತು ಶಿವ ಇಬ್ಬರನ್ನು ಸಮೀಕರಿಸಿರುವ ಲಾವಣಿಯಿದೆ. ಸೋಹಾ ಶಿವನು ಮತ್ತು ಅಲ್ಲಾ ಬೇರೆಯಲ್ಲ ಎಂಬ ಪ್ರತಿಪಾದನೆ ಇಲ್ಲಿದೆ. ಮುಸಲ್ಮಾನ ಕವಿಯೊಬ್ಬನಲ್ಲಿರುವ ಈ ವಿಶಾಲತೆಗೆ ಈ ನೆಲದ ಮುಸಲ್ಮಾನ ಕವಿಯೊಬ್ಬನಲ್ಲಿರುವ ಈ ವಿಶಾಲತೆಗೆ ಈ ನೆಲದ ಪರಂಪರೆಯ ಸಾಂಸ್ಕರ ಕಾರಣವೆನ್ನಲೇಬೇಕು"[೪೭]

'ಹಳ್ಳಿಗರು, ಜನಪದರು ದೇವ ದೇವತಾ ಭೇದ ಕಲ್ಪಸದೆ ಭಕ್ತಯಿಂದ ಎಲ್ಲ ದೇವ ದೇವತಾ ಭಿನ್ನ ಒಟ್ಟಿನಲ್ಲಿ ದೇವರು ಎಂದು ಶ್ರದ್ಧೆಯನ್ನಿಟ್ಟರೂ ಆದರೆ ಕೆಲವು ಜಾತ್ಯಭಿಮಾನಿ, ಧರ್ಮಾಭಿಮಾನಿಗಳ ಸಂಗದಿಂದ ಪ್ರಚೋದನೆಯಿಂದ ಹಳ್ಳಿಗರ ಮುಗ್ಧ ಮನಸ್ಸುಗಳಲ್ಲಿಯೂ ಸಂಕುಚಿತ ಪ್ರವೃತ್ತಿ ಇತ್ತೀಚಿಗೆ ಇಣುಕುತ್ತಿರುವುದು ಮಾತ್ರ

ವಿಷಾದದ ಸಂಗತಿ"[೪೮] ಈ ಮಾತುಗಳು ಹೊಸೂರರ ವಿಮರ್ಶೆ ಪ್ರಜ್ಞೆಗೆ ನಿದರ್ಶನವಾಗಿದೆ.

'ಜಾನಪದದಲ್ಲಿ ಸಹಕಾರ' ಮೌಲಿಕ ಲೇಖನ, ಸಹಕಾರದ ಎಲ್ಲ ಮಗ್ಗಲುಗಳನ್ನು ಇದರಲ್ಲಿ ಪರಿಚಯಿಸಲಾಗಿದೆ. ಅರ್ಥ ವ್ಯವಸ್ಥೆಯಲ್ಲಿ ಸಹಕಾರ ಭಾಗದಲ್ಲಿ ಆಯಗಾರರು ಬೀಜದಾನ, ಎತ್ತುಗಳ ಮುಯ್ಯಿ, ಸಮಾಜ ಕಾರ್ಯಗಳಲ್ಲಿ ಸಹಕಾರ, ಭಾಗದಲ್ಲಿ ಗುದ್ದಲಿ ಬೀಳುವುದು, ಪಟ್ಟಿ ಮಾಡುವುದು, ಕರಿಕಟ್ಟುವುದು, ದೈವದ ಭಾಂಡೆಗಳು, ಸದಾಚಾರಗಳಲ್ಲಿ ಸಹಕಾರ ಭಾಗದಲ್ಲಿ ಮಜ್ಜಿಗೆ ಮಾರಬಾರದು, ಗಿಣ್ಣಕೊಟ್ಟಾಗ ಬರಿಪಾತ್ರೆ ತಿರುಗಿಸಬಾರದು, ಗುಡಿಸಲುಮನೆ ಸುಟ್ಟು ಕೊಂಡವರಲ್ಲಿಗೆ ಬರಗೈಯಿಂದ ಹೋಗಬಾರದು, ಸತ್ತ ಮನೆಯ ದುಃಖ ಶಮನ ಮಾಡಬೇಕು, ಕೌಟುಂಬಿಕ ಸಮಾರಂಭಗಳಲ್ಲಿ ಸಹಾಕಾರ ಭಾಗದಲ್ಲಿ ಮೈನೆರೆದ ಸಮಾರಂಭ, ಬಷ್ಪಗಿ, ಮದುವೆ, ಬಯಕೆಯೂಟ, ಮುಂತಾಗಿ ಉಪಶೀರ್ಷಿಕೆಗಳ ಅಡ್ಡಿಯಲ್ಲಿ ವಿಷಯ ವಿವರಿಸಿದ್ದಾರೆ. ಜನಪದ ಸಾಹಿತ್ಯದಲ್ಲಿ ಸಹಕಾರವೆಂಬ ಭಾಗವು ಇಡೀ ಲೇಖನವನ್ನು ಸಮಾರೋಪಗೊಳಿಸುತ್ತದೆ. ಹೊಸೂರರ ಜೀವನಾನುಭವ ವಿಸ್ತೃತ ಕ್ಷೇತ್ರ ಕಾರ್ಯಕ್ಕಿದು ಉದಾಹರಣೆಯಾಗಿದೆ.

ಈ ಪ್ರಸ್ತುತ ಕೃತಿಯ ಕೊನೆಯ ಲೇಖನದ ಶಿರ್ಷಿಕೆ ಆಕರ್ಷಕವಾಗಿದೆ. 'ಗೊಂದಲದ ಗೊಂದಲದ' ಚರ್ಚೆಯಿದೆ. ಶ್ರೀ ಕ್ಯಾತನಹಳ್ಳಿ ರಾಮಣ್ಣನವರು 'ಗೊಂದಲ ಒಂದು ಪುನರ್ ವಿಮರ್ಶೆ' ಎಂಬ ಲೇಖನದಲ್ಲಿ ಹೊಸೂರರು ಬರೆದ ಲೇಖನಕ್ಕೆ ಆಕ್ಷೇಪವೆತ್ತಿದ್ದಾರೆ. ಅವರ ಆಕ್ಷೇಪಕ್ಕೆ ಸಾಕ್ಷಾಧಾರಗಳನ್ನು ನೀಡಿ, ತಮ್ಮ ವಾದವನ್ನು ಎಲ್ಲ ಮೂಲಗಳನ್ನು ಬಳಸಿಕೊಂಡು ಪುಷ್ಟಿಕರಿಸಿದ ಲೇಖನವಿದು, ಅಧ್ಯಯನದ ಆಳ ಅಗಲವಾದದಲ್ಲಿ ಸಂಯಮ, ಅತೀವ ಎಚ್ಚರಿಕೆವಹಿಸಿದ ಕ್ರಮ ತೂಕಬದ್ಧವಾದ ಭಾಷೆಯ ಬಳಕೆ ಪ್ರಜ್ಞಾಪೂರ್ವಕವಾದ ಬರವಣಿಗೆಯ ಮಾದರಿಯಾಗಿ ಈ ಲೇಖನ ನಿಲ್ಲುತ್ತದೆ. ಹೊಸೂರರ ಅಡಿಟಿಪ್ಪಣೆಯನ್ನು ನೋಡಿದರೆ ಸಾಕು ಅವರ 'ವಿದ್ವತ್' ಪರಿಚಯವಾಗುತ್ತದೆ. ಕ್ಯಾತನಹಳ್ಳಿ ರಾಮಣ್ಣನವರು ಕೆಣಕಿದ್ದರಿಂದ ಜ್ಯೋತಿ ಹೊಸೂರರ ಪ್ರತಿಭೆ ಮತ್ತು ಪಾಂಡಿತ್ಯದ ವಿರಾಟ್ ದರ್ಶನವಾಗಿದೆ. ಗೊಂದಲವು ದ್ರಾವಿಡ ಮೂಲದ ಕನ್ನಡ ಪದವೆಂಬುದನ್ನು ಹೊಸೂರರು ಪ್ರತಿಪಾದಿಸಿದ್ದಾರೆ. ಮುನ್ನುಡಿ, ಹಿನ್ನುಡಿ, ಪ್ರಸ್ತಾವನೆಗಳ ಯಾವ ಹಂಗಿಲ್ಲದೆ, ಹೊರಬಂದ ವಿಮರ್ಶಾ ಗ್ರಂಥವಿದು. ಕನ್ನಡ ತಿಳುವಳಿಕೆಯನ್ನು ಜಾನಪದ ಜಗತ್ತಿನ ಜ್ಞಾನವನ್ನು ವಿಸ್ತರಿಸುತ್ತದೆ. ಜ್ಯೋತಿ ಹೊಸೂರರ ಒಬ್ಬ ಒಳ್ಳೆಯ ಸಮರ್ಥ ವಿಮರ್ಶಕರೆಂದು ಸಾರಲು ಈ ಗ್ರಂಥವೊಂದು ಸಾಕೆನಿಸುತ್ತದೆ.

**೩.೩. ಸಂಶೋಧನೆ :**

ಪಾಶ್ಚಿಮಾತ್ಯರ ಸಾಹಿತ್ಯದ ಪ್ರಭಾವ, ಪ್ರೇರಣೆಯಿಂದ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹಲವು ರೂಪಗಳು ಕಾಣಿಸಿಕೊಂಡಿವೆ. ಅವುಗಳಲ್ಲಿ ಸಂಶೋಧನೆಯೂ ಒಂದಾಗಿದೆ. ಸಂಶೋಧನೆ ಎಂದರೆ ಸತ್ಯದ ಆವಿಸ್ಕಾರವನ್ನು ಮಾಡುವುದು. ಅಥವಾ ನಮ್ಮಿಂದ

ಕಣ್ಮರೆಯಾದ ವಿಷಯ, ವಸ್ತುವನ್ನು ಹುಡುಕಿ ಹೊರತೆಗೆದು ಅದಕ್ಕೊಂಡು ಶುದ್ಧರೂಪವನ್ನು ನೀಡುವುದಾಗಿದೆ. ಅಂದರೆ ಇಲ್ಲಿ ಸಂಶೋಧಕನು ತನ್ನ ಜಾಣತನದಿಂದ ಸಿಕ್ಕ ವಸ್ತುವಿನಲ್ಲಿ ಹೊಸದನ್ನು ಗುರುತಿಸುವ, ತೋರಿಸುವ, ಒರಿಗೆ,ಹಚ್ಚುವ ತೀಕ್ಷ ಬುದ್ಧಿಯನ್ನು ಉಳ್ಳವನಾಗಿದ್ದು, ಆತನ ದೃಷ್ಟಿ ಹದ್ದಿನ ಹಾಗೆ ಇದ್ದು, ಚಿಕಿತ್ಸಕ ಬುದ್ಧಿಯಿಂದ ಕೂಡಿರುತ್ತದೆ. ಹೀಗಾಗಿ ಆಧುನಿಕ ಕನ್ನಡ ಸಾಹಿತ್ಯ ಈ ಸಂಶೋಧನೆಯ ಮೊದ ಮೊದಲು ಕೇವಲ ಮಾಹಿತಿಯನ್ನು ಸಂಗ್ರಹಿಸಿ, ಪರೀಕ್ಷಿಸಿದರೆ ಅದೇ ಒಂದ ಸಂಶೋಧನೆಯಾಗುತ್ತಿತ್ತು. ಆದರೆ ಇತ್ತೀಚಿನ ದಿನಮಾನಗಳಲ್ಲಿ ಸಂಶೋಧನೆಯಲ್ಲಿ ಅನೇಕ ರೀತಿಯ ಹೊಸ ಹೊಸ ಆಯಾಮಗಳು, ವಿವಿಧ ರೀತಿಯ ವಿಷಯಗಳು, ನವೀನತೆಯ ನೋಟ ಸೃಷ್ಠಿಯಾಗುತ್ತ ಸಾಗಿವೆ. ಮಾಹಿತಿಯನ್ನು ವಿಶ್ಲೇಷಿಸಿ, ಪರೀಕ್ಷರಿಸಿ, ವೈಧಾನಿಕತೆಯನ್ನು ಅಳವಡಿಸಿ, ಅದಕ್ಕೊಂದು ತಾತ್ವಿಕ ಚೌಕಟ್ಟನ್ನು ನಿರ್ಮಿಸುವುದು, ಅಥವಾ ಗುರುತಿಸುವುದಾಗಿದೆ. ಇವುಗಳ ಜೊತೆಗೆ ತೌಲನಿಕ, ಅಧ್ಯಯನಗಳು ಪ್ರಾರಂಭಗೊಂಡಿವೆ. ಹೀಗೆ ದತ್ತು ಸಾಮಗ್ರಿಯನ್ನು ಸಂಗ್ರಹಿಸುವುದರ ಜೊತೆಗೆ ಅದನ್ನು ಮುರಿದು, ಕಟ್ಟುವ ಹೊಸ ಹೊಸ ಆಯಾಮಗಳು ಸೃಷ್ಠಿಯಾಗುತ್ತ ಸಾಗುತ್ತಿವೆ. ಹೀಗಾಗಿ ಸಂಶೋಧನಾ ಪ್ರಕಾರವು ಇವತ್ತಿನ ದಿನಗಳಲ್ಲಿ ಅತೀ ಹೆಚ್ಚು ಗಮನ ಸೆಳೆದ ರೂಪವಾಗಿ, ಸೃಜನಾತ್ಮಕ ಕಾರ್ಯಗಳಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಈ ಸಂಶೋಧನಾ ಪ್ರಕಾರದಲ್ಲಿ ಅನೇಕ ಸಂಶೋಧಕರು ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ. ಅವರುಗಳಲ್ಲಿ ಶ್ರೀಯುತ ಜ್ಯೋತಿಹೊಸೂರ ಅವರೂ ಒಬ್ಬರು.

ಹೊಸೂರ ಅವರ ಸಂಶೋಧನೆಯು ಜನಪದ ಸಾಹಿತ್ಯ ಕುರಿತಾಗಿ ಕೈಗೊಂಡಿದ್ದಾರೆ. ಶಂಬಾ ಜ್ಯೋಷಿಯವರ ಸಂಶೋಧನಾ ವಿಧಾನ, ರೀತಿ, ಮಾರ್ಗ ಹಾಗೂ ನೋಡುವದೃಷ್ಠಿ ಇವುಗಳನ್ನು ಬಹಳಷ್ಟು ಪ್ರಭಾವವನ್ನು ಬೀರಿವೆ. ಜಾನಪದ ಸಾಹಿತ್ಯದಲ್ಲಿ ಸಂಶೋಧನೆಯ ಕಾರ್ಯವನ್ನು ಮಾಡಿದ ಗದಗಿನಮಠ, ಜಿ.ಶಂ.ಪ, ನಾಗೇಗೌಡ, ಆನಂದಕಂದ ಮುಂತಾದ ವಿದ್ವಾಂಸರ ಕಾರ್ಯವನ್ನು ಮುಂದುವರಿಸುತ್ತಿರುವರಲ್ಲಿ ಜ್ಯೋತಿ ಹೊಸೂರ ಅವರು ಪ್ರಮುಖರಾಗಿದ್ದಾರೆ. ಜ್ಯೋತಿ ಹೊಸೂರ ಅವರ ತಿಕ್ಷ್ಣ ವಿಚಾರಧಾರೆ, ಪ್ರಗತಿಪರ ನಿಲುವೂ ಚಿಕಿತ್ಸಕ ದೃಷ್ಟಿ ಸಂಶೋಧನೆಗೆ ಹೇಳಿ ಮಾಡಿಸಿದ ಅಂಶಗಳಾಗಿವೆ. ಪ್ರತಿಯೊಂದರಲ್ಲಿ ವಜ್ರ, ಒರೆಗಲ್ಲಿಗೆ ಹಾಸ್ಯದ ಗುಣ ಹೊಸೂರ ಅವರದಾಗಿದೆ. ಹೀಗಾಗಿ ಇವರ ಸಂಶೋಧನೆಗೆ ಒಂದು ಘನತೆಯಿದೆ. ಅದನ್ನೆಲ್ಲಾ ವಿಸ್ತಾರವಾಗಿ ಚರ್ಚಿಸಲಾಗಿದೆ.

**ಜನಾಂಗಿಕ ನೆಲೆ :**

'ಜಾತಿಗಾರ' ಹೆಸರಿನ ಜನಾಂಗವೊಂದು ಕರ್ನಾಟಕದಲ್ಲಿದೆಯೆಂಬುದೇ ಅನೇಕರಿಗೆ ಗೊತ್ತಿಲ್ಲ ಹಾವನೂರ ಆಯೋಗ ವರದಿಯಲ್ಲಿ 'ಜಾತಿಗಾರ' ಎಂಬ ಜನಾಂಗದ ಉಲ್ಲೇಖ ಇಲ್ಲ. ಹೀಗಿದ್ದರೂ ಸಹ 'ಜಾತಿಗಾರ' ಎಂಬ ಜನಾಂಗದವರು ಕರ್ನಾಟಕ ಹಲವೆಡೆ

ಇಂದಿಗೂ  ಜಮಖಂಡಿ, ಮೂಡಲಗಿ, ಮುಧೋಳ, ಮುಂತಾದ ಕಡೆ ಇದ್ದಾರೆ. ಜಾತಿಗಾರರಿಗೆ ಯಾವುದೇ ರೀತಿ ಪ್ರಾದೇಶಿಕ ನೆಲೆ ಇಲ್ಲ. ಒಂದು ವೇಳೆ ಇದ್ದರೂ ಸಹ ಒಂದೇ ನೆಲೆಯಲ್ಲಿ ಇರುವುದಿಲ್ಲಾ. ಇದೊಂದು ಅರೆ ಅಲೆಮಾರಿ ಜನಾಂಗ. ಕನ್ನಡ ಜಾನಪದ ಮತ್ತು ಕರ್ನಾಟಕದ ಸಾಂಸ್ಕೃತಿಕ ಪರಂಪರೆಯನ್ನು ಹೆಚ್ಚಿಸುವಂತಹ ಉಪಯುಕ್ತವಾದ ಜಾತಿಗಾರ ಜಾತಕ ಕೃತಿಯನ್ನು ಹೊಸೂರರು ಹೊರತಂದಿದ್ದು ಆಳವಾದ ಅಧ್ಯಯನ ವ್ಯಾಪಕ ಕ್ಷೇತ್ರ ಕಾರ್ಯಕ್ಕೆ ಸಾಕ್ಷಿಯಾಗಿದೆ.

"ಜಾನಪದ ಅಧ್ಯಯನಗಳಲ್ಲಿ ಜನಾಂಗ ಪದವನ್ನು ತಪ್ಪಾಗಿ ಬಳಸಲಾಗುತ್ತಿದೆ. ಎಷ್ಟೋ ಬಾರಿ ಜಾತಿ ಮತ್ತು ಬುಡಕಟ್ಟುಗಳಿಗೆ ಸಂವಾದಿಯಾಗಿ ಅದನ್ನು ಬಳಸಲಾಗಿದೆ. ಆಧುನಿಕ ಮಾನವ ಶಾಸ್ತ್ರಜ್ಞರು ಅನುವಂಶಿಯತೆಯನ್ನು ಗಮನದಲ್ಲಿರಿಸಿಕೊಂಡು ಜಗತ್ತಿನಲ್ಲಿ ಮುಖ್ಯವಾಗಿ ನಾಲ್ಕು ಜನಾಂಗಗಳಿವೆ ಎಂದು ಹೇಳಿದ್ದಾರೆ. ಅವುಗಳೆಂದರೆ ಕಪ್ಪು ಚರ್ಮ ಗುಂಗುರು ಕೂದಲು, ದಪ್ಪ ತುಟಿಗಳಿರುವ ನಿಗ್ರೋಯಿಡ್, ಕಂದು ಚರ್ಮ, ಉದ್ದತಲೆ, ಚಪ್ಪಟೆ ಮೂಗುಗಳಿರುವ ಅಸ್ಟ್ರಾಲಾಯಿಡ್, ಬಿಳಿಚರ್ಮ, ನುಣುಪಾದ ಕಪ್ಪು ಕೂದಲು ಗಾಢ ಕಂದು ಗಣ್ಣದ ಕಣ್ಣು, ತೆಳ್ಳನೆಯ ಉದ್ದ ಮೂಗುಗಳಿರುವ ಕಾಕಾಸಾಯಿಡ್ ಮತ್ತು ತಿಳಿ ಹಳದಿ ಬಣ್ಣದ ಚರ್ಮ, ಕಪ್ಪು ಕೂದಲು, ಅಗಲವಾದ ಮುಖ, ಕುಳ್ಳನೆಯ ಸ್ಥೂಲ ದೇಹಗಳಿರುವ ಮಂಗೋಲಾಯಿಡ್ ಎಲ್ಲ ಜನಾಂಗಗಳು ಸಮಾನ ಎಂದು ಮಾನವ ಶಾಸ್ತ್ರಜ್ಞರು ಸಾರಿ ಹೇಳುತ್ತಿದ್ದರೂ ಜನಾಂಗವಾದ ಇನ್ನು ಉಳಿದಿದೆ."[೪೯] ಜಾನಪದ ಕೈಪಿಡಿಯಲ್ಲಿ 'ಜನಾಂಗದ ಬಗ್ಗೆ ಸ್ಪಷ್ಟಪಸಿದ್ದಾರೆ. ಒಂದು ಜನಾಂಗದ  ಜೀವನದ ಸ್ಥಿತಿಗತಿಯನ್ನು ಅನಾವರಣಗೊಳಿಸುವ ಕೃತಿಯನ್ನು ಜ್ಯೋತಿ ಹೊಸೂರರು ಕ್ಷೇತ್ರ ಕಾರ್ಯದ ಮೂಲಕ ಕಟ್ಟಿಕೊಟ್ಟಿದ್ದಾರೆ. ಕನ್ನಡಕ್ಕಿದು ಹೊಸದು. ಕೃತಿಯು ಚಿಕ್ಕದಾದರು ಚೊಕ್ಕಾಗಿ ಒಂದು ಜನಾಂಗದ ಸಾಂಸ್ಕೃತಿಕ ಸಾಮಾಜಿಕ  ಜೀವನದ ಒಟ್ಟು ಚಿತ್ರಣವನ್ನು ಬಿಂಬಿಸುವ ವಿಷಯವನ್ನು ಸ್ಪಷ್ಟತೆಗಾಗಿ ವರ್ಗೀಕರಿಸಿದ್ದನ್ನು ಕಾಣಬಹುದಾಗಿದೆ.

**೧. ಜಾತಿಗಾರರ ಸ್ಥಿತಿಗತಿ :**

ವಾಸಿಸುವ ಪ್ರದೇಶ, ಭಾಷೆ ಮತ್ತು ಮತ, ಮತಾಂತರ ಪೂರ್ವತಿಹಾಸಕ್ಕೆ ಮುನ್ನ, ಜಾತಿಗಾರ ಪೂರ್ವತಿಹಾಸ ಹೀಗೆ ಮೊದಲನೇ ಭಾಗದಲ್ಲಿ ವಿಂಗಡಿಸಿದ್ದಾರೆ.

**೨. ಜಾತಿಗಾರರ ಬಾಳಬಟ್ಟೆ :**

ಹಬ್ಬ ಹರಿದಿನಗಳ ಆಚರಣೆ, ಶುಭಾಶುಭ ಶಕುನ ಮತ್ತು ನಂಬುಗೆ, ಸಂಸ್ಕಾರಗಳು, ಕಸುಬುಗಳು, ಲಾಗ ಕಸರತ್ತುಗಳು, ವಿಡಂಬಕ ಸೋಗುಗಳು, ಸಿದ್ಧಕಸಿದ್ದಿಯ ಸೋಗು, ಸಿದ್ದಕಸಿದ್ದಿ ಸೋಗಿನ ಹಿನ್ನೆಲೆ ಮುದುಕಿಯ ಸೇಗು, ಸೆಟ್ಟೆಯ ಸೋಗು, ಜೀವನ ವಿಧಾನ, ಸ್ವಾಭಾವ, ಸಾಮಾಜಿಕ ಸ್ಥಾನಮಾನ, ಹಿಂದುಳಿದವರಲ್ಲಿ ಹಿಂದುಳಿದವರು, ವೈಜ್ಞಾನಿಕತೆಯ ಆಘಾತ, ಬದಲಾವಣೆಯ ತಿರುವಿನಲ್ಲಿ, ಮುಕ್ತಾಯಕ್ಕೆ ಮುನ್ನ

ಹೀಗೆ ಹೊಸೂರರು 'ಜಾತಿಗಾರ ಜಾತಕ' ಕೃತಿಯನ್ನು ವಿಭಾಗಿಸಿ ಒಂದು ಜನಾಂಗದ ಒಟ್ಟಾರೆ ಸ್ಥಿತಿಗತಿ ತಿಳಿಸುವುದರೊಂದಿಗೆ ಇದು ಜನಪದ ವೃತ್ತಿ ಕಲಾವಿದರ ಜನಾಂಗವೊಂದನ್ನು ಕುರಿತು ಸಂಶೋಧನಾತ್ಮಕ ಕೃತಿಯಾಗಿದೆ. ಕನ್ನಡ ಜಾನಪದ ಮತ್ತು ಕರ್ನಾಟಕ ಸಾಂಸ್ಕೃತಿಕ ಪರಂಪರೆಯ ಅಭ್ಯಾಸಿಗಳಿಗೆ ಅತ್ಯಂತ ಉಪಯುಕ್ತ ವಿಷಯ ಮತ್ತು ವಿವರ ಈ ಗ್ರಂಥದ ಮೂಲಕ ಮೊಟ್ಟ ಮೊದಲ ಬಾರಿಗೆ ಬೆಳಕು ಕಂಡಿರುವುದು ಗಮನಾರ್ಹ ಪ್ರಕಾಶಕರ ಮಾತುಗಳು ಪ್ರಸ್ತುತ ಕೃತಿಯ ಮಹತ್ವವನ್ನು ಸಾರುತ್ತದೆ.

ಅ. ಹುಟ್ಟು ಬೆಳವಣಿಗೆ
ಆ. ಸಾಂಸ್ಕೃತಿಕ ಅನನ್ಯತೆ
ಇ. ಹೊಸೂರರ ಸಾಧನೆ

**ಅ : ಹುಟ್ಟು ಬೆಳವಣಿಗೆ :**

ಹಲವು ವೇಷಗಳನ್ನು ಜನತೆಯ ಮುಂದೆ ಪ್ರದರ್ಶಿಸುವ ಮೂಲಕ ಉಪಜೀವನ ಸಾಗಿಸುವ ಬಹುರೂಪಿ, ವೇಷಗಾರ ಮತ್ತು ಜಾತಿಗಾರ ಹೆಸರಿನವರು ಹನ್ನೆರಡನೆಯ ಶತಮಾನದ ಆದಿಯಿಂದಲೂ ಕರ್ನಾಟಕದಲ್ಲಿ ಇದ್ದ ಬಗ್ಗೆ ಲಿಖಿತ ಉಲ್ಲೇಖಗಳು ದೊರೆಯುತ್ತೇವೆ.

"ಕ್ರಿ.ಶ ೧೧೧೨ ರಲ್ಲಿ ಬಾಳಿದ ಕವಿ ನಯಸೇನನು ತನ್ನ 'ಧರ್ಮಾಮೃತ' 'ಬಹುರೂಪಿಯಂತೆ ಪೊತ್ತಿಂಗೊಂದಂದ ಮಾಗದೆ' ಎಂಬುದಾಗಿ ಹೊತ್ತಿಗೊಂಡು ವೇಷ ಧರಿಸುವ ಬಹುರೂಪಿಗಳನ್ನು ಉಲ್ಲೇಖಿಸಿದ್ದಾನೆ".[೫೦] ಬಹುರೂಪಿಗಳ ಬಗ್ಗೆ ನಯಸೇನ ಕವಿಯು ಧರ್ಮಾಮೃತದಲ್ಲಿ ಉಲ್ಲೇಖಗೊಂಡುದನ್ನು ಈ ಮೊದಲೇ ಗಮನಿಸಿದ್ದೇವೆ. ಅಲ್ಲಿ ಕವಿನಯ ಸೇನನೂ ಬಹುರೂಪಿಗಳನ್ನು ಕುರಿತು ಕೀಳು ಭಾವನೆಯನ್ನೇ ಹೊಂದಿದ್ದಾನೆಂದು ಕಂಡು ಬರುತ್ತದೆ. ಆದ್ದರಿಂದ ಬಹುರೂಪಗಾರಿಕೆ ಮತ್ತು ವೇಷಗಾರಿಕೆ ಇವರೆಡೂ ಹನ್ನೇರಡನೇಯ ಶತಮಾನದಲ್ಲಿ ಕೀಳೆಂದು ಪರಿಗಣಿಸಲ್ಪಟ್ಟಿದ್ದವೆಂಬುದು ಸ್ಪಷ್ಟವಾಗಿದೆ. "ಚೌಡಯ್ಯನನ್ನು ಹಂತಿಯ ಹಾಡುಗಳಲ್ಲಿ' ಜಾತಿಗಾರ ಚೌಡಯ್ಯಾನೆಂದು ಹೆಸರಿಸಲಾಗಿದೆ".[೫೧]

ಬಹುರೂಪಿ ಕಾಯಕದ ಚೌಡಯ್ಯಾ ಹನ್ನೆರಡನೆಯ ಶತಮಾನದ ಪ್ರಮುಖ ಶಿವಶರಣರಲ್ಲೊಬ್ಬನಾಗಿದ್ದಾನೆ. ಈತನು ತಾನು ರಚಿಸಿದ ವಚನಗಳಲ್ಲಿ ಬಹುರೂಪಿ ಕಾಯಕದ ಪ್ರಸ್ತಾಪ ಮಾಡಿದ್ದಾನೆ. ಆದರೆ ಚೌಡಯ್ಯಾನ ವ್ಯಕ್ತಿಗತ ಹಿರಿಮೆಯಿಂದ ಶರಣರ ಸಮೂಹ ದಲ್ಲಿ ಅವನ ಬಹುರೂಪಿಗಾರಿಕೆಯು ಮಾತ್ರ, ಕಾಯಕವೆಂದು ತಿಳಿಲ್ಪಟ್ಟು, ಉನ್ನತಗೊಂಡಂತೆ ಕಾಣುತ್ತದೆ. ಆದ್ದರಿಂದ ಹನ್ನೆರಡನೆಯ ಶತಮಾನದಲ್ಲಿ ಶರಣರ ಸಾನಿಧ್ಯದಲ್ಲಿ ಬಹುರೂಪಿ ಚೌಡಯ್ಯನ ಕಾರಣದಿಂದಾಗಿ ವೇಷದಾರಿ ಮತ್ತು

ಕನ್ನಡ ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಬಹುರೂಪಿ ಭಿನ್ನರೆಂಬಂತೆ ತೋರುತ್ತಾರೆಂದು ನಿರ್ಧರಿಸಬೇಕಾಗುತ್ತದೆ.

"ಹೊರನೋಟಕ್ಕೆ ವೇಷಗಾರರು ಮತ್ತು ಬಹುರೂಪಿಗಳು ಒಂದೇ ವೃತ್ತಿಯವರು ಕಂಡರೂ ಅವರಿಬ್ಬರು ವೃತ್ತಿ ಪರಂಪರೆಗಳಲ್ಲಿ ಸಾಕಷ್ಟು ವ್ಯತ್ಯಾಸಗಳಿವೆ. ಕನ್ನಡ ನಾಡಿನಲ್ಲಿ ಒಂದು ಕಾಲಕ್ಕೆ ಪ್ರಚಾರದಲ್ಲಿದ್ದ ಬಹುರೂಪಿಗಳು ವೇಷಗಾರರಷ್ಟು ಸಾಧಾರಣ ವರ್ಗದವರಲ್ಲಿ, ವೀರಶೈವ ಧರ್ಮದ ಆಶ್ರಯದಲ್ಲಿ ಈ ಕಲೆ ಬೆಳೆದಿದ್ದು ಗಮನಿಸಬೇಕಾದ ಸಂಗತಿ. ಶಿವಶರಣರ ಕಾಲಕ್ಕೆ ಕಾಣಿಸಿಕೊಂಡು ನಾಲ್ಕೈದು ಶತಮಾನ ಬದುಕಿ, ಅದೃಶ್ಯವಾದಂತೆ ಕಾಣುತ್ತದೆ. ಅಥವಾ ತನ್ನ ವೈಶಿಷ್ಟ್ಯ ಕಳೆದುಕೊಂಡು ವೇಷಗಾರರ ಸಂಪ್ರದಾಯದಲ್ಲಿ ಬೆರತಿರುವ ಸಾಧ್ಯತೆಯೂ ಇದೆ".[೫೨] ಡಾ. ಮಲಶೆಟ್ಟಿಯವರು ಅಭಿಪ್ರಾಯದಂತೆ ವೀರಶೈವ ಧರ್ಮದ ಆಶ್ರಯದಲ್ಲಿ ಈ ಕೆಲ ಬೆಳೆದದ್ದು ನಿಜ. ಶರಣರ ವಚನಗಳಲ್ಲಿ ಕೆಲವು ಆಧಾರಗಳು ಉಂಟು. ಸಾಧಾರಣವಾಗಿದ್ದ ಜನ ಮನರಂಜನೆ ಮೂಲವಾಗಿದ್ದ ಈ ವೃತ್ತಿಕಲೆಗಳ ಹನ್ನೆರಡನೇ ಶತಮಾನದಲ್ಲಿ ಕಾಯಕದ ಮಟ್ಟಕ್ಕೇರಿತು. ನಂತರ ಕಾಲದಲ್ಲಿ ವೃತ್ತಿಗಳಾದವು.

130069

**ಆ : ಸಾಂಸ್ಕೃತಿಕ ಅನನ್ಯತೆ :**

"ಜಾತಿಗಾರರ ಜಾತಕ ೫೦ ಪುಟಗಳ ಸಣ್ಣಕೃತಿಯಾಗಿದ್ದರೂ ವಿಶಿಷ್ಟವಾಗಿದೆ. ವಿವಿಧ ವಿಡಂಬನಾತ್ಮಕ ಸೋಗು ಹಾಕಿ ಜನರನ್ನು ರಂಜಿಸುವ ಜಾತಿಗಾರರು ವೃತ್ತಿ ಕಲಾವಿದರು. ಜಾತಿಗಾರರ ಮೂಲ ಅವರ ಜೀವನ ಸಂಪ್ರದಾಯ, ಕಲೆ ಮುಂತಾದವುಗಳನ್ನು ಎಳೆ-ಎಳೆಯಾಗಿ ಬಿಡಿಸಿ ತೋರಿಸುವ ಈ ಕೃತಿ ಸಮುದಾಯ ಅಧ್ಯಯನದ ದಾರಿಯಲ್ಲಿ ಸಾಗಿದರು."[೫೩] ಎಂದು ಕರ್ನಾಟಕ ಸರಕಾರದ ಕನ್ನಡ ಪುಸ್ತಕ ಪ್ರಾಧಿಕಾರ ಹೊರತಂದ 'ಜಾನಪದ ಕೈಪಿಡಿ'ಯಲ್ಲಿ ದಾಖಲಿಸಿರುವುದು ಪ್ರಮುಖವಾಗಿದೆ.

"ಪ್ರತ್ಯೇಕ ಸಂಸ್ಕೃತಿಯನ್ನು ಹೊಂದಿರುವುದು ಬುಡಕಟ್ಟು ಸಮುದಾಯಗಳ ಪ್ರಧಾನ ಲಕ್ಷಣವಾಗಿದೆ".[೫೪] ಒಂದು ಸಮುದಾಯ ಅಥವಾ ಬುಡಕಟ್ಟು ಅನಿಕೊಳ್ಳಬೇಕಾದರೆ ಅನೇಕ ಲಕ್ಷಣಗಳನ್ನು ಒಳಗೊಂಡಿರಬೇಕೆಂದು ವಿದ್ವಾಂಸರ ಅಭಿಪ್ರಾಯ ಪಟ್ಟಿದ್ದಾರೆ. ಸಮುದಾಯ ಒಂದರ ಉಗಮದಿಂದ ಆರಂಭಗೊಂಡ ಸಂಸ್ಕೃತಿ, ನಿರಂತರವಾಗಿ ತನ್ನದೇ ಆದ ವಿಶಿಷ್ಟ ಗುಣಗಳನ್ನು ಹೊಂದಿರುತ್ತದೆ. ಇಂಥಹ ಸಮುದಾಯಗಳ, ಆಚರಣೆ, ನಂಬಿಕೆ ಸಂಪ್ರದಾಯಗಳ ಮೂಲಕ ಉಳಿದು ಬೆಳದಿರುತ್ತದೆ. ಈ ಹಿನ್ನೆಲೆಯಲ್ಲಿ ಜಾತಿಗಾರರ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಗಮನಿಸಬಹುದಾಗಿದೆ.

ಜಾತಿಗಾರರ ಸಂಸ್ಕಾರಗಳು, ನಂಬುಗೆ, ಕಸುಬುಗಳು, ಹಬ್ಬಹರಿದನಗಳ ಆಚರಣೆ, ಭಾಷೆ, ಮತಗಳ ಬಗ್ಗೆ ಜಾತಿಗಾರರೆಂದರೆ-ಕಲಾವಿದರು ಅದರಲ್ಲಿಯೂ ವೃತ್ತಿ ಕಲಾವಿದರು ವಿವಿಧ ಬಗೆಯ ವಿಡಂಬಕ ಸೋಗು ಹಾಕುವುದು, ಲಾಗ-ಕಸರತ್ತುಗಳ ಪ್ರದರ್ಶನ

ಮಾಡುವುದು. ಇದರ ಕಲೆಗಾರಿಕೆಯ ಕಾಯಕಗಳು ಇಂದಿಗೂ ಈ ವೃತ್ತಿಗಳು ಇವರಲ್ಲಿದ್ದರೂ ಬಹಳಷ್ಟು ಜನರು ಬೇರೆ ಬೇರೆ ವೃತ್ತಿಗಳಿಗೆ ಇಳಿದಿದ್ದಾರೆ. ಇವರು ಅವಲಂಬಿಸಿರುವ ಮತದಲ್ಲೂ ಸ್ಥಿತ್ಯಂತರವಾಗಿದೆ. ಹಿಂದೆ ಹಿಂದೂಗಳಾಗಿದ್ದವರು ಈಗ ಮುಸಲ್ಮಾನ ಮತಸ್ಥರು ಎಂಬುದು ಗಮನಿಸಬೇಕಾದ ಅಂಶವಾಗಿದೆ.

'ಜಾತಿಗಾರ' ರಿಗೆ ಸಂಸ್ಥಾನಿಕರು, ಸ್ಥಿತಿವಂತರ, ರಾಜಮಹಾರಾಜರು, ಶ್ರೀಮಂತರು ಇವರ ಕಸರತ್ತು, ಸೋಗಗಳನ್ನು ನೋಡಿ ಭೂಮಿ ಇನಾಮಕೊಟ್ಟಿರುವದನ್ನು ಲೇಖಕರು ಪ್ರತಿಪಾದಿಸಿದ್ದಾರೆ. ಇನಾಮಭೂಮಿ ಪಡೆದವರು ಬಿಜಾಪೂರ ಜಿಲ್ಲೆಯಲ್ಲಿ ಬರುತ್ತಾರೆ. ಸಂಚಾರ ಉತ್ತರ ಕರ್ನಾಟಕದಲ್ಲಿ ಹೈದ್ರಾಬಾದ ಕರ್ನಾಟಕದಲ್ಲಿ ಸಂಚರಿಸುವುದುಂಟು, ಅಲ್ಲದೇ ಗಡಿ ಪ್ರದೇಶವಾದ ಮಹಾರಾಷ್ಟ್ರಕ್ಕೆ ಸಂಚರಿಸುವರು ಎಂದಿದ್ದಾರೆ. ಕೃತಿಯಲ್ಲಿ ಜಾತಿಗಾರ ಜೀವನವನ್ನು ಬಹಳ ಸೂಕ್ಷ್ಮವಾಗಿ ಕ್ಷೇತ್ರ ಕಾರ್ಯ ಮಾಡಿ ಹೊಸೂರರು ಅಧ್ಯಯನಶೀಲರಾಗಿ ಜನಾಂಗಿಕ ನೆಲೆಯನ್ನು ಸ್ಪಷ್ಟಪಡಿಸಿದ್ದಾರೆ.

**ಇ : ಹೊಸೂರರ ಸಾಧನೆ :**

ಇತಿಹಾಸವನ್ನು ನಾವು ತಿರುವಿ ನೋಡಿದಾಗ ಹೆಚ್ಚು ಕಾಲ ಭಾರತವನ್ನು ಆಳಿದವರು ಮುಸ್ಲಿಂ ದೊರೆಗಳು, ಆಕ್ರಮಣಗಳು ಹೆಚ್ಚಾಗಿದ್ದವು ಇಂತಹ ಕಾಲದಲ್ಲಿ ಮತಾಂತರ ಅನಿವಾರ್ಯ, ಆದರೂ ಭಾರತದಲ್ಲಿ ೯೫% ರಷ್ಟು ಮುಸ್ಲಿಂರು ಮತಾಂತರಗೊಂಡ ಹಿಂದೂಗಳು ಎಂದು 'ಜಾತಿಗಾರ ಜಾತಕ' ಕೃತಿಯಲ್ಲಿ ಸ್ಪಷ್ಟವಾಗಿ ತಿಳಿಸುತ್ತದೆ. ಇತಿಹಾಸದಲ್ಲಿ ಏನುಬೇಕಾದರೂ ಆಗಿರಬಹುದು. ಆದರೆ ಈ ಕೃತಿಯಲ್ಲಿ ಹೊಸೂರರ ಸೂಕ್ಷ್ಮಕ್ಷೇತ್ರಕಾರ್ಯದಿಂದ ಶೋಧನೆ ಮಾಡಿ ಸತ್ಯವನ್ನು ಬಯಲಿಗೇಳಿರುವುದು ಗಮನಾರ್ಹವಾಗಿದೆ. ಜಾತಿಗಾರರು ವಿಡಂಬಕ ಸೋಗು, ಸಿದ್ದಿಕಸಿದ್ದಿ ಸೋಗು, ಮುದುಕಿಯ ಸೋಗು, ಶೆಟ್ಟಿಯ ಸೋಗು, ಹೀಗೆ ಜಾತಿಗಾರರ ವಿಭಿನ್ನ ಮುಖಗಳನ್ನು ಪರಿಚಯಿಸುವಲ್ಲಿ ಹೊಸೂರರು ಯಶಸ್ವಿಯಾಗಿದ್ದಾರೆ.

"ಸಿದ್ದಿಕಸಿದ್ದಿ' ಇಲ್ಲವೇ 'ಸಿದ್ದಿಕ ಬಕರಾ' ಹೆಸರಿನ ವಿಡಂಬಕ ಸೋಗನ್ನರಿಯದವರ ಸುಮಾರು ನಾಲವತ್ತು ವರ್ಷಗಳ ಹಿಂದೆ ನಮ್ಮ ಭಾಗದಲ್ಲಿ ಒಬ್ಬರೂ ಸಿಗುತ್ತಿರಲಿಲ್ಲ. ಹುಡುಗರಿಗಂತೂ ಈ ಸೋಗು ಹಸಿವು ನೀರಡಿಕೆ ಮರೆಯಿಸುತ್ತಿತ್ತು. ನಾನು ಬಾಲ್ಯದಿಂದಲೇ ಈ ಸೋಗಿಗೆ ಮನಸೋತವನು ಬೆಳದಂತೆ ಈ ಬಗೆಗಿನ ಆಸಕ್ತಿಯೂ ನನ್ನಲ್ಲಿ ಬೆಳೆಯಿತು. ಸಹಜವಾಗಿಯೇ ಇವರನ್ನು ಕುರಿತು ಹಲವಾರು ಸಂಗತಿ ಸಂಗ್ರಹಿಸಿದೆ. ಕನ್ನಡ ಸಾಹಿತ್ಯದ ಅಧ್ಯಯನ ಕಾಲದಲ್ಲಿ ಇನ್ನಷ್ಟುಮಾಹಿತಿ ಸಿಕ್ಕಿತು. ಕುತೂಹಲ ಹೆಚ್ಚಿ ಪರಿವೀಕ್ಷಣೆ ಮಾಡಿದೆ. ಆಸಕ್ತರೊಂದಿಗೆ ವಿಚಾರ ವಿನಿಮಯ ಮಾಡಿದೆ. ಎಲ್ಲಾ ಮೂಲಗಳಿಂದ ದೊರೆತ ಸಾಮಗ್ರಿ ಸೇರಿಸಿ ಈ ಗ್ರಂಥ ಸಿದ್ದಗೊಳಿಸಿದೆ."[೫೫] ಈ ಮಾತುಗಳು ಲೇಖಕರು ಕೈಗೊಂಡ ಕಾರ್ಯ ಸಾಧನೆ ಎಂದು ಹೇಳುವ ಮಾತು ಸ್ಪಷ್ಟವಾಗಿದೆ.

‘ಕೈ ಮಾರಿಕೊಂಡಿದ್ದರೂ ಕುಲ ಮಾರಿಕೊಂಡಿಲ್ಲ’ ಎಂಬ ಗಾದೆ ಹೇಳಿ ತಮ್ಮ ಜನಾಂಗದ ಬಗ್ಗೆ ತಾಳಿಕೊಂಡಿರುವ ಹೆಮ್ಮೆಯಿಂದ ಸಮರ್ಥಿಸಿಕೊಂಡಿದ್ದಾರೆ. ಇವರು ಸಂಚಾರಿ ಜೀವನ ಇರುವುದರಿಂದ ಇವರು ‘ಡೇರೆ’ ಅಂದರೆ ತಮ್ಮ ವಾಸದ ಮನೆಯನ್ನು ಒಂದು ತಾಸಿನಲ್ಲಿ ಕಟ್ಟಿಕೊಳ್ಳುವುದು. ಒಂದು ವಿಶಿಷ್ಟವಾದದ್ದು.

ಇತ್ತೀಚಿಗೆ ಬುಡಕಟ್ಟು ಅಧ್ಯಯನವು ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಇಂತಹ ಜನಾಂಗವನ್ನು ಕುರಿತು ಅಧ್ಯಯನ ಹಾಗೂ ವಿಶೇಷ ಕಾರ್ಯನಿರ್ವಹಿಸುತ್ತಲಿದೆ. ಇಪ್ಪತ್ತು ವರ್ಷಗಳ ಹಿಂದೆ ಯಾವ ಫಲಾಫಲದ ಅಪೇಕ್ಷೆಯಿಲ್ಲದೇ ಹೊಸೂರರು ಮಾಡಿದ ಈ ಜನಾಂಗೀಕ ಅಧ್ಯಯನ ನಿಜವಾಗಿಯೂ ಒಂದು ಸಾಂಸ್ಕೃತಿಕ ಅನನ್ಯತೆಯ ಕಾರ್ಯವಾಗಿದೆ.

**ಕನಕದಾಸ ಜೀವನ ವಿಚಾರ :**

ಕನಕದಾಸ ಜೀವನ ವಿಚಾರವು ೧೯೮೩ ರಲ್ಲಿ ಪ್ರಕಟವಾದ ಕೃತಿ, ವಿಮರ್ಶೆಗೆ ವಿಮರ್ಶೆಯಾಗಿ, ಜೀವನಚರಿತ್ರೆಯಾಗಿ ನಿಂತರೂ, ಮುಖ್ಯವಾಗಿ ಇದೊಂದು ಸಂಶೋಧನಾತ್ಮಕ ಚರಿತ್ರೆಯೆಂಬುದು ಲೇಖಕರ ಅನಿಸಿಕೆಯಾಗಿದೆ. ಪ್ರಗತಿಶೀಲ ಮನೋಭಾವದ ವಿಕಾಸ ಮತ್ತು ಮುಕ್ತ ವೈಚಾರಿಕತೆಗೆ ಪ್ರಚೋದನೆ ಮೂಲಕ ಮಾನವ ಪ್ರಜ್ಞೆಯನ್ನು ಜಾಗೃತಗೊಳಿಸಬಲ್ಲ ವಾಙ್ಮಯ ಪ್ರಕಟನೆಯೆಂಬುದು ಪ್ರಕಾಶಕರ ಅರಿಕೆಯಾಗಿದೆ. “೧೯೬೫ರಲ್ಲಿ ಕನಕದಾಸನ ೪೦೦ನೆಯ ಉತ್ಸವವನ್ನು ಕರ್ನಾಟಕದ ತುಂಬೆಲ್ಲ ಆಚರಿಸಲಾಯಿತು. ಆಗ ಅವನ ಜೀವನ ಕೃತಿಗಳನ್ನು ಕುರಿತು ಪತ್ರಿಕೆಗಳಲ್ಲಿ ಲೇಖನಗಳು ಪ್ರಕಟವಾದವು. ಅವುಗಳನ್ನು ಓದಿ, ಅವನ ಕೃತಿಗಳ ವೈಶಿಷ್ಟ್ಯಗಳ ಬಗ್ಗೆ ಆಕರ್ಷಿತವಾಗಿದೆ. ಅವನ ಎಲ್ಲ ಕೃತಿಗಳ ಬಗ್ಗೆ ಅಭ್ಯಾಸ ಮಾಡತೊಡಗಿದೆ. ಸ್ವತಂತ್ರ್ಯ ವ್ಯಕ್ತಿತ್ವವುಳ್ಳ ಜೀವಿಯೊಂದು ಪರಂಪರೆಯ ಕಟ್ಟಿನಲ್ಲಿ ಸಿಕ್ಕಕೊಂಡಾಗ ಎಷ್ಟೊಂದು ಬಗೆಯಲ್ಲಿ ಚಡಪಡಿಸಬೇಕಾಗುತ್ತದೆ ಎಂಬುದನ್ನು ಅವನ ಕಿರ್ತನೆಗಳಿಂದ, ಉಳಿದ ಕಾವ್ಯ ಕೃತಿಗಳಿಂದ ಅರಿತುಕೊಂಡೆ, ಅಂದಿನ ಪರಿಸ್ಥಿತಿಯ ಒತ್ತಡದಿಂದಾಗಿ ಸಂಪ್ರದಾಯದ ಚೌಕಟ್ಟಿನಲ್ಲಿಯೇ ಬದುಕುವುದಕ್ಕೆ ತನ್ನನು ತಾನೇ ತಳ್ಳಿಕೊಂಡರೂ ಕನಕದಾಸನು ತನ್ನ ಕೃತಿಗಳಲ್ಲಿ ಅಭಿವ್ಯಕ್ತಿ ಮಾಡಿದ ದಲಿತ ಪ್ರಜ್ಞೆ ಮತ್ತು ಬಂಡಾಯ ಪ್ರವೃತ್ತಿಗಳು ನನ್ನನ್ನು ವಿಚಾರಕ್ಕೀಡು ಮಾಡಿದವು. ಆಗ ಈ ಅಂಶಗಳನ್ನು ವಿವರಿಸಿ, ವಿಶ್ಲೇಷಿಸಿ ಅವನ ಬರಹ ಮತ್ತು ಬದುಕನ್ನು ಕುರಿತು ಬರೆಯಬೇಕೆಂಬ ಬಯಕೆ ಹುಟ್ಟಿತು, ಬರೆದೆ.”[೫೬] ಎಂದಿರುವುದು ಸ್ಪಷ್ಟವಾಗಿದೆ.

ಹದಿನೆಂಟು ವರ್ಷಗಳ ಅಧ್ಯಯನ ಚಿಂತನಮಂಥನದ ಫಲವಾಗಿ ಪ್ರಸ್ತುತ ಕೃತಿ ರೂಪಗೊಂಡಿದೆ, ಪ್ರಸ್ತುತ ಕೃತಿಯಲ್ಲಿ ಮುಖ್ಯವಾಗಿ ಎರಡು ಭಾಗಗಳಿವೆ. ಪೂರ್ವಾರ್ಧವು ಕನಕದಾಸನ ಬರಹವನ್ನು ಒಳಗೊಂಡಿದ್ದರೆ, ಉತ್ತರಾರ್ಧವು ಆತನ ಬದುಕಿನವಿವಿಧ ಮಜಲುಗಳನ್ನು ಕಟ್ಟಿಕೊಡುತ್ತದೆ. ಪ್ರವೇಶ ತುಂಬ ಆಕರ್ಷಕವಾಗಿದೆ. ಕನ್ನಡ ಸಾಹಿತ್ಯವನ್ನು

ಜನಸಾಮಾನ್ಯರ ಮನೆಬಾಗಿಲವರೆಗೆ ಮುಟ್ಟಿಸಲು ಮೊಟ್ಟಮೊದಲು ಬಾರಿಗೆ ಹೆಣಗಿದವರೆಂದರೆ ಶಿವಶರಣರು ಹೀಗೆ ಕನ್ನಡ ಸಾಹಿತ್ಯದ ಪಕ್ಷಿನೋಟದವನ್ನೇ ಪ್ರವೇಶದಲ್ಲಿ ಕಣ್ಣ ಮುಂದೆ ಕಟ್ಟಿ ನಿಲ್ಲಿಸುತ್ತದೆ. ತದನಂತರ ದಾಸಸಾಹಿತ್ಯ ಪ್ರವೇಶಿಸುತ್ತದೆ.

'ಹರಿದಾಸರಲ್ಲಿ ಕನಕದಾಸನು ವೈಶಿಷ್ಟ್ಯಪೂರ್ಣ ವ್ಯಕ್ತಿತ್ವ ಅಂದಿನ ಸಾಮಾಜಿಕ ಪ್ರತಿಬಂಧಕ ಪರಿಸರದಲ್ಲಿ ಸ್ವಂತಿಕೆಯ ಬಲದಿಂದ ಹೋರಾಡುತ್ತ–ಹೋರಾಡುತ್ತಾ ಮುನ್ನಡೆದವನಿವನು, ಪ್ರತಿಷ್ಠಿತರ ಪಟ್ಟಭದ್ರರ ಅಡ್ಡಿ–ಆತಂಕಗಳನ್ನು ಮೆಟ್ಟಿನಿಂತು ಜನಸಾಮಾನ್ಯರ ಹೃದಯದಲ್ಲಿ ಬಾವುಕಭಕ್ತರ ಮನದಲ್ಲಿ ಮಹಾನ್‌ದಾಸ್‌ನೆಂಬ ಸ್ಥಾನ ಪಡೆದವನಿವನು ಹೀಗಿದ್ದರೂ ದಾಸಕೂಟದ ಹರಿದಾಸ್ ಪರಂಪರೆಯಲ್ಲಿ ಕನಕದಾಸನಿಗೆ ಮನ್ನಣೆಯ ಸ್ಥಾನವಿಲ್ಲವೆಂಬುದನ್ನು ಪರಿಶೀಲನೆಯಿಂದ ತಿಳಿದು ಬರುತ್ತದೆ."[೫೭] ಎಂಬುದು ಮಹತ್ತರವಾಗಿದೆ.

"ಕನಕದಾಸರ ಹುಟ್ಟು ಬ್ರಾಹ್ಮಣೇತರ ಜಾತಿಯೊಂದರಲ್ಲಿ ಉಳಿದಲ್ಲಿ ಹರಿದಾಸರು ಬ್ರಾಹ್ಮಣರು, ಕನಕದಾಸನ ಕೀರ್ತನೆ ಮತ್ತು ಕಾವ್ಯ ಕೃತಿಗಳಲ್ಲಿಯೂ ಕೂಡ ಯಾವೊಂದು ಮತಕ್ಕೆ ಬದ್ಧತೆಯನ್ನು ತೋರಿಸದೆ ತನ್ನ ಸ್ವತಂತ್ರ ಮತ್ತು ಸಮನ್ವಯ ಮನೋಭಾವವನ್ನು ಅಭಿವ್ಯಕ್ತಿಗೊಳಿಸಿದ ಹರಿದಾಸನಿವನು. ಹೀಗಾಗಿ ಪರಂಪರಾ ಪ್ರಿಯರಿಗೆ ಕನಕದಾಸ ದೊಡ್ಡ ಸಮಸ್ಯೆಯಾಗಿರಬಹುದು. ಪರಂಪರೆಯ ಪಡಿಯಚ್ಚಿನ ಹರಿದಾಸರ ಮೌಲಿಕೆಯಲ್ಲಿ ಇವನ ಹೆಸರು ಸೇರ್ಪಡೆಗೊಳ್ಳದಿರುವದರ ಗುಟ್ಟು ಇದುವೆ ಆಗಿರಬಹುದು".[೫೮] ಸಮಸ್ಯೆಯ ಮಾಲಕ್ಕಿಳಿದು ಸತ್ಯವನ್ನು ಶೋಧಿಸುವ ಅಂಶವನ್ನು ಕಾಣುತ್ತೇವೆ.

ಕನಕದಾಸನ ಕೃತಿಗಳ ಭಾಗದಲ್ಲಿ ಕೀರ್ತನೆಗಳು 'ರಾಮಧಾನ್ಯಚರಿತ್ರೆ', 'ಮೋಹನ ತರಂಗಿಣಿ', 'ನಳಚರಿತ್ರೆ', 'ಹರಿಭಕ್ತಿಸಾರ' ಮೊದಲಾದ ಕೃತಿಗಳನ್ನು ಚರ್ಚಿಸಿದ್ದಾರೆ. ಕನಕದಾಸನ ಕೃತಿಗಳ ಬಗ್ಗೆ ಅಧಿಕೃತತೆ ಇಲ್ಲಿದೆ. "ಕನಕದಾಸನು ನಮ್ಮನ್ನಾಗಲಿ ಸುಮಾರು ನಾನೂರು ವರ್ಷಗಳು ಕಳೆದಿವೆ. ಆದರೂ ತನ್ನ ಕೃತಿಗಳ ಮೂಲಕ ಅವನಿನ್ನು ಬದುಕಿದ್ದಾನೆ. ಮುಂಬರುವ ವರ್ಷಗಳಲ್ಲಿ ಅವನಹಲವು ಕೀರ್ತನೆಗಳು ತಮ್ಮ ಪ್ರತಿಗಾಮಿ ಗುಣಗಳಿಂದ ಜಿಜ್ಞಾಸೆಗಳ ಅವಜ್ಞೆಗೊಳಗಾಗಬಹುದು. ಆದರೆ ಕೆಲವು ಕೀರ್ತನೆಗಳಾದರೂ ಕಾಲಾತೀತವಾಗಿ ಉಳಿದು ವಿವಿಧ ಕಾರಣಗಳಿಗಾಗಿ ಚಿಕಿತ್ಸಕರನ್ನು ಆಕರ್ಷಿಸಿ ಅವರ ಅಭ್ಯಾಸಕ್ಕೆ ಅರ್ಹವಾಗುತ್ತಿವೆ ಎಂಬಲ್ಲಿ ಸಂಶವಯವಿಲ್ಲ. ಕಾವ್ಯಕೃತಿಗಳಲ್ಲಿ 'ರಾಮಧಾನ್ಯ ಚರಿತ್ರೆ,' 'ಮೋಹನ ತರಂಗಿಣಿ,' ಮತ್ತು 'ನಳಚರಿತ್ರೆ' ಇವು ಬೇರೆ ಬೇರೆ ಕಾರಣಗಳಿಂದಾಗಿ ಬೇರೆ ಬೇರೆ ಅಭಿರುಚಿಯ ಬೇರೆ ಬೇರೆ ಮಟ್ಟದ ಜನರ ಗಮನವನ್ನು ಮುಂಬರುವ ದಿನಗಳಲ್ಲಿ ಸೆಳೆಯಲು ಶಕ್ತವಾಗಬಲ್ಲ ಅಂತಸತ್ತ್ವ ಒಳಗೊಂಡವುಗಳಾಗಿವೆ. ಆದ್ದರಿಂದ ಕನಕದಾಸನು ಮುಂದೆಯೂ ಕೂಡ ತನ್ನ ಕಾವ್ಯಕೃತಿಗಳ ರೂಪದಲ್ಲಿ ಬದುಕುತ್ತಾನೆ."[೫೯] ಎಂದು ಧೈರ್ಯದಿಂದ ಹೇಳಿದ್ದನ್ನು ಕಾಣುತ್ತೇವೆ.

ಸಾಹಿತ್ಯ ಕೃತಿಗಳ ಮೂಲಕ ಸುಮಾರು ನಾನೂರು ವರ್ಷಗಳಿಂದಲೂ ಪ್ರಸ್ತುತನಾಗಿ ಬದುಕಿರುವ, ಮುಂದೆಯೂ ಬದುಕುವ ಭರವಸೆಯಿರುವ ಕನಕದಾಸರ ಭೌತಿಕ ಜೀವನಕೂಡ ಏರು-ಪೇರುಗಳಿಂದ ಕೂಡಿತ್ತು ಮತ್ತು ವೈವಿಧ್ಯಮಯವೂ ಆಗಿತ್ತು. ಇಂದಿಗಿಂತಲೂ ಹೆಚ್ಚಿಗಿದ್ದ ಅಂದಿನ ಸಾಮಾಜಿಕ ವಿಷಮತೆ ಅದರಲ್ಲೂ ಜಾತಿ ವೈಷಮ್ಯತೆಗಳಿಂದಾಗಿ ಅವನ ಜೀವನ ಹೋರಾಟಮಯವೂ ಆಗಿತ್ತು. ಆದ್ದರಿಂದಲೇ ಕನಕದಾಸನ ಭೌತಿಕ ಬದುಕನ್ನು ಅರಿತುಕೊಳ್ಳುವುದು. ಈ ಕೆಲವು ದೃಷ್ಟಿಕೋನಗಳಿಂದ ಇಂದಿನಸಂಕ್ರಮಣ ಕಾಲದಲ್ಲಿ ಪ್ರಚೋದಕವಾಗಿದೆ ಪ್ರಯೋಜಕವಾಗಿದೆ. ಎಂದಿರುವುದು ವಿಸ್ತಾರವಾದ ಅಧ್ಯಯನಕ್ಕೆ ಪುರಾವೆಯಾಗಿದೆ. ಮಾನವ ತನ್ನ ಕೃತಿಗಳ ರೂಪದಲ್ಲಿ ಅದರಲ್ಲೂ ನಿರಂತರ ಪ್ರಸ್ತುತವಾಗಬಲ್ಲ ಅಂತಸ್ತ್ವವುಳ್ಳ ಕೃತಿಗಳ ರೂಪದಲ್ಲಿ ಬದುಕುತ್ತಾನೆ ಅಂಥ ಬದುಕು ಎಷ್ಟರ ಮಟ್ಟಿಗೆ ಕನಕದಾಸನದಾಗಿತ್ತೆಂಬುದನ್ನು ಗ್ರಂಥಕರ್ತರು ಇಲ್ಲಿ ವಿವೇಚಿಸಿದ್ದಾರೆ. ಹೀಗಾಗಿ ಇದು ಓದುಗರನ್ನು ತಣಿಸುತ್ತದೆ ಎಂಬ ಮಾತು ಸತ್ಯವಾಗಿದೆ.

ಉತ್ತರಾರ್ಧದಲ್ಲಿ ಕನಕದಾಸರ ಬದುಕಿನ ಚಿತ್ರಣವಿದೆ. ಪ್ರವೇಶ, ಹುಟ್ಟು, ಶಿಕ್ಷಣ, ಸಂಸ್ಕಾರ, ಸಂಸಾರ, ಕಾವ್ಯಕೃತಿಗಳ ಕಾಲಾನುಕ್ರಮದ ಚರ್ಚೆಯಿದೆ. 'ನೃಸಿಂಹಸ್ತವ'ನ ಪ್ರಕಟವಾಗಿಲ್ಲ. ಮತ, ಜಾತಿ, ಜೀವನಾವಧಿ, ಜೀವನದ ಕೊನೆಯ ದಿನಗಳು ಸಮಾರೋಪ ಹೀಗೆ ಬದುಕನ್ನು ಹಂತ ಹಂತವಾಗಿ ವಿವೇಚನೆಗೆ ಎತ್ತಿಕೊಳ್ಳಲಾಗಿದೆ. ಚಿಂತನ ಮಂಥನ ಜಿಜ್ಞಾಸೆಗಳಿಂದ ವಿಮರ್ಶಾತ್ಮಕ ನಿಲವು, ಸಂಶೋಧನೆಯ, ಫಲಿತಾಂಶಗಳ ಮೇಲೆ ರಚಿತವಾದ ಗ್ರಂಥವಾಗಿರುವುದರಿಂದ ಮೌಲಿಕವಾಗಿ ರಚಿತವಾದ ಗ್ರಂಥವಾಗಿರುದರಿಂದ ಮೌಲಿಕವಾಗಿ ಮೂಡಿ ಬಂದಿದೆ. "ಮತ ಧರ್ಮಗಳ ತೆಕ್ಕೆಯಿಂದ ಹೊರಗಿದ್ದು ಬರೆದಿದ್ದರೆ ಅವನ ಕಾವ್ಯಗಳು ಇನ್ನಷ್ಟು ಕ್ರಾಂತಿಕಾರಕವಾಗುತ್ತಿದ್ದು ಎಂದು ಊಹಿಸಬಹುದು. ಹೀಗಾಗದಿರುವುದು ಒಂದು ದೊಡ್ಡ ದುರಂತ ಅವನಿಗೂ ನಾಡಿಗೂ ಆಗಿರುವ ಹಾನಿ ಸಂಪ್ರದಾಯದ ಅಂದಿನ ಕಾಲಮಾನದ ಹಿಡಿತದಲ್ಲಿದ್ದು ಇಷ್ಟಾದರೂ ಹೊಸತನದ ತೋರಿಸಿದುದು ಅವನ ವೈಶಿಷ್ಟ್ಯ ಈ ವೈಶಿಷ್ಟದಿಂದಾಗಿಯೇ ಅವನ ಕೃತಿಗಳಿಗೆ ಪ್ರಾಶಸ್ತ್ಯ ಅವನ ಬದುಕಿಗೆ ಬೆಲೆ."[೬೦] ಎಂಬುದು ಸ್ಪಷ್ಟವಾಗಿದೆ.

ಕನ್ನಡದಲ್ಲಿ ಕನಕದಾಸರನ್ನು ಕುರಿತಾಗಿ ಬಂದ ಇನ್ನುಳಿದ ಗ್ರಂಥಗಳಿಗಿಂತ ಜ್ಯೋತಿ ಹೊಸೂರ ಅವರ ಪ್ರಸ್ತುತ ಗ್ರಂಥ ನಿಜವಾಗಿಯೂ ಅತ್ಯುತ್ಕೃಷ್ಟವಾಗಿದೆ. ಕನಕದಾಸರ ಕೃತಿಗಳನ್ನು ಅರಿತುಕೊಳ್ಳಲು, ಅರ್ಥೈಸಿಕೊಳ್ಳಲು ಮಹತ್ವದ ಆಕರ ಗ್ರಂಥವಾಗಿದೆ. ವಿಮರ್ಶೆಗೆ-ವಿಮರ್ಶೆಯಾಗಿ, ಸಂಶೋಧನೆಗೆ-ಸಂಶೋದನೆಯಾಗಿ, ತೌಲನಿಕ ಸಾಹಿತ್ಯಕ್ಕೆ ನಿಲ್ಲುವ ಸಾಮರ್ಥ್ಯ ಪಡೆದಿದೆ. ಇಂದು ಪ್ರಚಲಿತವಾಗುತ್ತಿರುವ ಸಾಂಸ್ಕೃತಿಕ ಸಂಶೋಧನೆಗೆ ಮಹತ್ವದ ದಾಖಲೆಯಾಗಿದೆ.

**ಜಾನಪದ ಕುರಿತು :**

'ಜಾನಪದಕುರಿತು' ವಿಮರ್ಶಾ ಸಂಕಲನವಾಗಿದೆ. 'ಕಾಲಗತಿ' ಪ್ರಕಾಶನದ 'ಜಾನಪದ ಮಂಟಪ'ದ ಮೂಲಕ ಹೊರಬಂದಿರುವ ಪುಸ್ತಕ ಜಾನಪದ ವಿಷಯಕ್ಕೆ ಸಂಬಂಧಿಸಿದ ಲೇಖನಗಳ ಗುಚ್ಛವಾಗಿದೆ. ಸದಭಿರುಚಿಯ ಪೋಷಣೆ ಪ್ರಗತಿಶೀಲತೆಗೆ ಪ್ರೇರಣೆ ಮುಕ್ತ ವೈಚಾರಿಕತೆಗೆ ಪ್ರಚೋದನೆ ನೀಡಿ, ಮಾನವ ಪ್ರಜ್ಞೆಯನ್ನು ಜಾಗೃತಗೊಳಿಸುವುದು ತನ್ಮೂಲಕ ಸತ್ಯಾನ್ವೇಷಣೆ ಮತ್ತು ಆನಂದಾನ್ವೇಷಣೆ ಮಾಡುವುದು, ಕಾಲಗತಿ ಪ್ರಕಾಶನದ ಉದ್ದೇಶ ವಾಗಿದೆ ಎಂಬ ಮಾತು 'ಕಾಲಗತಿ' ಪ್ರಕಾಶನದ ಆಶಯವನ್ನು ವಿವರಿಸುತ್ತದೆ. ಈ ಆಶಯ ಹೊತ್ತಿರುವ ಕೃತಿ ಜಾನಪದ ಕುರಿತು ಪ್ರಕಟವಾಗಿದೆ.

'ಜಾನಪದ ಕುರಿತು' ಸಂಶೋಧನಾತ್ಮಕವಾದ ಈ ಕೃತಿಯಲ್ಲಿ ಆರು ಪ್ರಬಂಧಗಳ ಸಂಕಲನ ಶ್ರೇಷ್ಠ ದರ್ಜೆಯ ವಿದ್ವತ್ ಗೋಷ್ಠಿಯಲ್ಲಿ ಮಂಡಿಸಲಾಗಿರುವ ಪ್ರಬಂಧಗಳೇ ಇಲ್ಲಿ ಸಂಕಲನಗೊಂಡಿರುವದರಿಂದ ಇವೆಲ್ಲವೂ ಉನ್ನತ ಮಟ್ಟದವಾಗಿವೆ. ಜಾನಪದ ಕಲೆ, ನಾಟಕ ಸಾಹಿತ್ಯ, ಮುಂತಾದವುಗಳಿಗೆ ಸಂಬಂಧಿಸಿದಂತೆ ಅತ್ಯಂತ ಉಪಯುಕ್ತ ಮಾಹಿತಿ ಇಲ್ಲಿಯ ಲೇಖನಗಳಲ್ಲಿ ತುಂಬಿಕೊಂಡಿದೆ."[೬೧] ಎಂಬ ಪ್ರಕಾಶಕರ ಮಾತು ಪ್ರಸ್ತುತ ಕೃತಿಯ ಬಗ್ಗೆ ಕುತೂಹಲ ಮೂಡಿಸುತ್ತದೆ.

ಬೆಳಗಾವಿ ಜಿಲ್ಲೆಯ ಜನಪದ ಕಲೆಗಳು, ಸಣ್ಣಾಟಗಳ ಪ್ರಯೋಗ, ಕಲಾತಂತ್ರ, 'ಆನಂದಕಂದರ ಜಾನಪದ ಕಾರ್ಯ', 'ಕಿತ್ತೂರ ವೀರರನ್ನು ಕುರಿತು ಜನಪದ ಸಾಹಿತ್ಯ,' ಜಂಬಗಿಯವರ 'ಜಾನಪದ ಗೆಜ್ಜೆ ನುಡಿತ,' ೧೯೮೪ರ 'ಜನಪದ ಸಾಹಿತ್ಯ' ಈ ರೀತಿಯಾಗಿ ಒಟ್ಟು ಆರು ಮೌಲಿಕ ಲೇಖನಗಳನ್ನು ಒಳಗೊಂಡ ಕೃತಿಯಾಗಿದೆ.

"ಬೆಳಗಾವಿ ಜಿಲ್ಲೆಯ ಜನಪದ ಕಲೆಗಳು' ಮೈಸೂರಿನಲ್ಲಿ ಜರುಗಿದ ಪ್ರಪ್ರಥಮ ವಿಶ್ವಕನ್ನಡ ಮೇಳದಲ್ಲಿ ಜಾನಪದ ಗೋಷ್ಠಿಯಲ್ಲಿ ಮಂಡಿಸಲು ಸಿದ್ದಪಡಿಸಿದ ಪ್ರಬಂಧವಾಗಿದೆ. ಆದ್ದರಿಂದ ಅತ್ಯಂತ ಏರೆತ್ತರದ ಸ್ಥಾನದಲ್ಲಿದೆ. ಮಹಾಪ್ರಬಂಧದ ಶೈಕ್ಷಣಿಕ ಶಿಸ್ತು ಇದಕ್ಕಿದೆ. ಪೀಠಿಕೆ, ಜನಪದ ಹಾಡುಗಾರಿಕೆ, (ಗಾಯನ) ಜನಪದನೃತ್ಯಗಳು, ವಾದನ ಕಲೆಗಳು, (ವಾದ್ಯ ಮೇಳಗಳು) ಜನಪದ ಮನರಂಜನೆಗಳು, ಪಗರಣ, ವೃತ್ತಿ ಮನರಂಜನೆ, ಜನಪದ ರಚನಾ ಕಲೆಗಳು, ಬಯಲಾಟ, (ಜನಪದ ನಾಟಕ) ಇದರಲ್ಲಿ ಮೂಡಲಪಾಯ, ಉತ್ತಕರ್ನಾಟಕದ ದೊಡ್ಡಾಟ, ಸಣ್ಣಾಟ, ದಪ್ಪಿನಾಟ, ಸಂಗ್ಯಾಬಾಳ್ಯಾ, ಪಾರಿಜಾತ ಇತ್ಯಾದಿಗಳ ಪಕ್ಷಿನೋಟ ಒದಗಿಸಿ, ಕೊನೆಗೆ ಸಮಾರೋಪಗೊಳಿಸಿದ್ದಾರೆ. ಇಪ್ಪತ್ತೈದು ಪುಟಗಳ ಜಾನಪದ ಮಾಹಿತಿಗಳಿಂದ ಕೂಡಿದ ಲೇಖನವಿದು. ಎಲ್ಲವನ್ನು ಇದರಲ್ಲಿ ಪ್ರಸ್ತಾಪಿಸಲು ಸಾಧ್ಯವಿಲ್ಲ. ಆದರೆ 'ಪಾರಿಜಾತ' ವನ್ನು ಪ್ರಸ್ತಾಪಿಸದೇ ಇರಲೂ ಕೂಡ ಸಾಧ್ಯವಿಲ್ಲ. ಬಯಲಾಟ ಪರಂಪರೆಗೆ ಬೆಳಗಾವಿ ಜಿಲ್ಲೆ ನೀಡಿದ ಇನ್ನೊಂದು ಅತ್ಯಂತ ಶ್ರೇಷ್ಠ ಕಾಣಿಕೆಯೆಂದರೆ 'ಪಾರಿಜಾತ' ಅದರಲ್ಲಿಯೂ ಶ್ರೀ ಕೃಷ್ಣಪಾರಿಜಾತ ಇದೂ ಸಣ್ಣಾಟವೆಂಬುದಾಗಿ

ಕೆಲವು ಹಿರಿಯ ವಿದ್ವಾಂಸರು ಅಭಿಪ್ರಾಯ ಪಟ್ಟಿರುವುದುಂಟು. ಆದರೆ ಇದಕ್ಕೆ ತನ್ನದೇ ಆದ ಕೆಲವು ವೈಶಿಷ್ಟಗಳಿರುವುದರಿಂದ ಪಾರಿಜಾತವನ್ನು ಒಂದು ಪ್ರತ್ಯೇಕ ಪ್ರಕಾರವೆಂದು ಪರಿಗಣಿಸಬೇಕೆಂಬುದಾಗಿ ಡಾ. ಮಲಶೆಟ್ಟಿಯವರು ತಮ್ಮ ಮಹಾಪ್ರಬಂಧದಲ್ಲಿ ಅಭಿಪ್ರಾಯಪಟ್ಟಿದ್ದು, ಸರಿಯಾಗಿದೆ. ಈ ಕೃತಿಯನ್ನು ಎಲ್ಲಿಂದರಲ್ಲಿ ಅನುಕರಿಸಿ 'ಶಿವ ಪಾರಿಜಾತ' ಎಂಬ ಇನ್ನೊಂದು ಕೃತಿಯೂ ಚಿಕ್ಕೋಡಿ ತಾಲೂಕಿನ ಕಾಡಾಪೂರ ಗ್ರಾಮದ ಬಸವಂತಪ್ಪ ಸಾಲಿ ಎಂಬವರಿಂದ ರಚನೆಗೊಂಡಿರುವುದನ್ನು ಅದು ಕೆಲವು ತಂಡಗಳವರಿಂದ ಹಲವಾರು ಬಾರಿ ಪ್ರಯೋಗಗೊಂಡುಧನ್ನು ಪ್ರಸ್ತಾಪಿಸಿದ್ದಾರೆ. ಒಂದು ಸಂಶೋಧನಾ ಪ್ರೌಢ ಪ್ರಬಂಧದ ವಿಷಯವನ್ನೆಲ್ಲ ಭಟ್ಟಿಯಿಳಿಸಿ ಹತ್ತಾರು ಸಾಲುಗಳಲ್ಲಿ ಕ್ರೋಢಿಕರಿಸಿರುವುದು ಹೊಸೂರರ ವಿಮರ್ಶಕನ ಪ್ರಜ್ಞೆಗೆ ಸಾಕ್ಷಿಯೊದಗಿಸುತ್ತದೆ.

'ಸಣ್ಣಾಟಗಳ ಪ್ರಯೋಗ ಕಲಾತಂತ್ರ' ಇಂಥದೇ ಮಹತ್ವದ ಬರವಣಿಗೆ ಗುಲ್ಬರ್ಗಾ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಸಂಘಟಿಸಿದ ಸಣ್ಣಾಟಗಳ ವಿಚಾರಗೋಷ್ಠಿಯಲ್ಲಿ ಮಂಡಿಸಿದ ಪ್ರಬಂಧವಾಗಿದೆ. ಶೈಕ್ಷಣಿಕ ಶಿಸ್ತುಗಳನ್ನು ಒಳಗೊಂಡಿರುವ ಅಚ್ಚುಕಟ್ಟಾದ ಬರವಣಿಗೆಗೆ ಮಾದರಿಯಾಗಿದೆ. 'ಆನಂದಕಂದರ ಜಾನಪದ ಕಾರ್ಯ'ವು ಬೆಳಗಾವಿಯ ಸ್ನಾತಕೋತ್ತರ ಕೇಂದ್ರದಲ್ಲಿ ಏರ್ಪಡಿಸಲಾಗಿದ್ದು, ಆನಂದ ಕಂದರಸಾಹಿತ್ಯ ಕುರಿತು ವಿಚಾರ ಸಂಕೀರ್ಣದಲ್ಲಿ ಮಂಡಿಸಿದ ಪ್ರಬಂಧವಾಗಿದೆ.

'ಕಿತ್ತೂರ ವೀರರನ್ನು ಕುರಿತು ಜನಪದ ಸಾಹಿತ್ಯ'ವು ಡಾ. ನಿಂಗಣ್ಣ ಸಣ್ಣಕ್ಕಿ ಮತ್ತು ಶಿವಲಿಂಗಪ್ಪ ಭಾವಿಕಟ್ಟಿಯವರ 'ಜಾನಪದದಲ್ಲಿ ಕಿತ್ತೂರ' ಗ್ರಂಥಕ್ಕಾಗಿ ಬರೆದಿರುವ ಬೆನ್ನುಡಿಯಾಗಿದೆ. ಆದರೆ ಇದೊಂದು ಸ್ವತಂತ್ರ ಲೇಖನದಂತೆಯೇ ಮೂಡಿ ಬಂದಿದೆ. "ಕಿತ್ತೂರ ಇಂದು ಒಂದು ಸಾಮಾನ್ಯ ಪಟ್ಟಣ. ಆದರೆ ಸುಮಾರು ನೂರೈವತ್ತು ವರ್ಷಗಳ ಹಿಂದೆ ಅದು ಸಂಪದ್ಭಂತವಾದ ಚಿಕ್ಕ ಸಂಸ್ಥಾನವಾಗಿತ್ತು. ಮನವನ್ನು ಮಿಡಿಯುವ, ಹೃದಯವನ್ನು ಹಿಂಡುವ ಅಭಿಮಾನವನ್ನು ಬಡಿದೆಬ್ಬಿಸುವ ಕಿತ್ತೂರ ಚೆನ್ನಮ್ಮಾ ಮತ್ತು ಸಂಗೊಳ್ಳಿ ರಾಯಣ್ಣ ಅವರ ಅದ್ಭುತ ಕಾರ್ಯ ಚಟುವಟಿಕೆಗಳು ನಮ್ಮ ನಾಡಿನ ಅಭಿಜಾತ ಕವಿಗಳ ಮನಸ್ಸನ್ನು ಕದಡಿಸದೇ ಇದ್ದದ್ದು ಗಮನಾರ್ಹ ಸಂಗತಿ. ಜನಪದ ಸಾಹಿತ್ಯವನ್ನು ಮೊದಲಿಸುವ ಶಿಷ್ಠರು ತಲೆ ತಗ್ಗಿಸುವ ಪ್ರಸಂಗ ಇಲ್ಲಿದೆ. ಹಾಗೆ ನೋಡಿದರೆ ಗಂಡಸುತನ ಅಭಿವ್ಯಕ್ತಿ ಮಾಡುವ ಸಾಹಿತ್ಯ ಸೃಷ್ಠಿ ನಮ್ಮ ಅಭಿಜಾತ ಕವಿಗಳೆ ಎಂದು ಆಗಿದೆ."[೬] ಎಂಬ ಸವಾಲಿನ ಮಾತು ಶಿಷ್ಠ ಕವಿಗಳು ಮುಟ್ಟಿ-ಮುಟ್ಟಿ ನೋಡಿಕೊಳ್ಳವಂತಿದೆ.

ಪ್ರಸಿದ್ಧಿಯನ್ನು, ಪಾರಿತೋಷಕಗಳನ್ನು ಬಯಸದ ಆಳರಸರಿಗೆ ಅಂಜದ, ಅಭಿಮಾನವನ್ನು ಮಾರಿಕೊಳ್ಳದ ಜನಪದ ಕವಿಗಳು ಮಾತ್ರ ಸುಮ್ಮನೆ ಕೂಡ್ರಲಿಲ್ಲ. ಈ ಪ್ರಶಂಸೆ ಸಮರ್ಥನೀಯವಾಗಿದೆ. ವೈಜ್ಞಾನಿಕತೆಯ ದಾಳಿಯಿಂದಾಗಿ, ಜೀವನದ

ಸಂಕೀರ್ಣತೆಯಿಂದಾಗಿ ಪೂರ್ಣನಶಿಸಿ ಹೋಗಬಹುದಾದ ಇಂಥ ಜನಪದ ಹಾಡುಗಳನ್ನೆಲ್ಲ ಸಂಗ್ರಹಿಸಬೇಕು. ದಿನಗಳೆದಂತೆ ಮತ್ತು ದೊರೆಯದ ಸಾಂಸ್ಕೃತಿಕ ಸಂಪತ್ತು ನಾಶವಾಗುತ್ತದೆ. ವ್ಯಕ್ತಿಗತ ಹಾನಿ ಯಾರಿಗೂ ಆಗುವದಿಲ್ಲ. ಆದರೆ ನಾಡಿನ ಸಾಂಸ್ಕೃತಿ ಸಂಪತ್ತು ನಾಶವಾಗುತ್ತದೆಂಬ ಆತಂಕ ಇಲ್ಲವೆಂದು ಸಂಗ್ರಹಿಸುವ, ಪ್ರಕಟಿಸುವ ಕಾರ್ಯಕ್ಕೆ ಮುಂದಾಗಬೇಕೆಂದು ಸೂಚಿಸಿರುವುದು ಅವರ ಜಾನಪದ ಸಂರಕ್ಷಣೆ ಕಾಳಜಿಗೆ ಪೂರಕವಾಗಿದೆ.

ಜಂಬಗಿಯವರ 'ಜಾನಪದ ಗೆಜ್ಜೆನುಡಿತ'ವು ಬಾಲಕೃಷ್ಣ ಜಂಬಗಿ ಅವರ ಗೆಜ್ಜೆ ನುಡಿದಾವ ಗ್ರಂಥಕ್ಕಾಗಿ ಬರೆದ ಮುನ್ನುಡಿಯಾಗಿದೆ. ಆದರೆ ಸಾಂಪ್ರದಾಯಿಕ ಮುನ್ನುಡಿಗಳಿಂತ ವಿಭಿನ್ನವಾಗಿದ್ದು, ಸ್ವತಂತ್ರ ಲೇಖನಗಳಂತೆ ಓದಿಸಿಕೊಳ್ಳುತ್ತದೆ. "ಕನ್ನಡ ಜಾನಪದ ಕಾವ್ಯ ಪ್ರಕಾರಗಳಲ್ಲಿ ತ್ರಿಪದಿಯದೇ ಸಾಮ್ರಾಜ್ಯ. ಅಚ್ಚಕನ್ನಡ ಛಂದಸ್ಸಿನ ಜೀವ ಸತ್ತ್ವವಾಗಿರುವ ತ್ರಿಪದಿಯಲ್ಲಿ ರಚನೆಗೊಂಡಿರುವ ಜಾನಪದ ಪದ್ಯಗಳು ನಾಡವರನಾಲಿಗೆಯ ಮೇಲೆ ನಲಿದಾಡುತ್ತಾ ಕಾಲ ಪ್ರವಾಹದಲ್ಲಿ ಸಾಗಿ ಬಂದಿವೆ."[೬೩] ಎಂಬುದು ಗಮನಾರ್ಹವಾಗಿದೆ. "ಪರಭಾಷಾ ಪದಗಳನ್ನು ಹಳ್ಳಿಗರು ಸಹಜ ರೀತಿಯಲ್ಲಿ ತದ್ಭವಗಳನ್ನಾಗಿ ಮಾರ್ಪಾಡಿಸಿಕೊಳ್ಳುವುದಕ್ಕೆ ಇಲ್ಲಿ ಹೇರಳ ಉದಾಹರಣೆಗಳಿವೆ. ಭಾಷಾ ವಿಜ್ಞಾನಿಗಳು ಹೇಳುವ ಸ್ವಚ್ಛಂದ ಪರಿವರ್ತನೆಗೆ ಸಂಬಂಧಿಸಿದ ಉದಾಹರಣೆಗಳಿವೆ ಭಾಷಾ ವಿಜ್ಞಾನಿಗಳಿಗೆ ಹೊಸ ಸಂಗತಿಗಳು ಹೊಳೆಯುವ ಸಾಧ್ಯತೆ ಇಲ್ಲದಿಲ್ಲ".[೬೪] ಹೀಗೆ ಉಪಯುಕ್ತ ಲೇಖನವಾಗಿದೆ.

೧೯೮೩ರ ಜನಪದ ಸಾಹಿತ್ಯ ಸಮೀಕ್ಷಾ ಬರೆಹವಾಗಿದೆ. ವಿಮರ್ಶಾ ಶಿಸ್ತಿಗೆ ಮಾದರಿಯಾಗುವ ಮೌಲಿಕ ಲೇಖನವಿದು. ಜನಪದ ಪದ್ಯ ಸಾಹಿತ್ಯ ಜನಪದ ಗದ್ಯಕೃತಿಗಳು, ಬಯಲಾಟ, ಯಕ್ಷಗಾನ, ಜಾನಪದ ತತ್ವ, ವಿಮರ್ಶೆ ಪರಿಚಯ, ಜನಪದ, ಸಂಸ್ಕಾರ, ಧರ್ಮ, ಜನಪದ, ವಿಜ್ಞಾನ ಮತ್ತು ಸಮಾರೋಪ ಹೀಗೆ ಉಪಶೀರ್ಷಿಕೆಗಳಲ್ಲಿದ್ದು, ಶಾಸ್ತ್ರೀಯ ಶಿಸ್ತಿನಿಂದ ರೂಪಗೊಂಡಿದೆ. ಜ್ಯೋತಿ ಹೊಸೂರು ಶ್ರೇಷ್ಠ ವಿಮರ್ಶಕರೆಂಬುದನ್ನು ಮತ್ತು ಒಬ್ಬ ಶ್ರೇಷ್ಣ ಸಂಶೋಧಕನೆಂದು ಈ ಕೃತಿಯು ಸಾಬೀತುಪಡಿಸುತ್ತದೆ. "ಜನಪದಉಪಾಸನೆ' ಮತ್ತು 'ಜಾನಪದಕುರಿತು' ಎಂಬುವು ಜಾನಪದದ ಸಂಶೋಧನಾತ್ಮಕ, ವಿಮರ್ಶಾತ್ಮಕ ಲೇಖನಗಳನ್ನೊಳಗೊಂಡಿದೆ. ವೈವಿಧ್ಯಮಯವಾಗಿರುವ ಈ ಲೇಖನಗಳ ತುಂಬ ಜ್ಯೋತಿ ಹೊಸೂರ ಅವರ ಜಾನಪದವನ್ನು ಕುರಿತಾದ ಸೂಕ್ಷ್ಮವಾದ ಅವಲೋಕನ ಮತ್ತು ಖಚಿತ ವಿಶ್ಲೇಷಣಾತ್ಮಕ ನೀತಿಯನ್ನು ಗಮನಿಸಬಹುದು.".[೬೫] ಎಂಬ ಮಾತುಗಳು ಈ ಮೇಲಿನ ಅಭಿಪ್ರಾಯಕ್ಕೆ ಪೂರಕವಾಗಿದೆ.

**ಕೊನೆ ಟಿಪ್ಪಣೆಗಳು :**

೧. **ಹಸಿರುಕ್ರಾಂತಿ.** ದಿನಪತ್ರಿಕೆ. ಕೆ.ಎನ್. ದೊಡಮನಿ. ದಿ : ೦೫-೦೨-೨೦೦೩

೨. **ಬೆರಸಿ ಇಟ್ಟೀನ ಬೆಲ್ಲ ನೆನಗಡಲಿ.** ಪುಟ-೫ ಜ್ಯೋತಿ ಹೊಸೂರ ಜಾನಪದ ಮಂಟಪ ಪ್ರಕಾಶನ ರಾಯಬಾಗ. ೧೯೬೯.

೩. ಅದೇ ಪುಟ – ೩

೪. ಅದೇ ಪುಟ – ೬೮

೫. **ಜಾನಪದ ಕೈಪಿಡಿ.** ಪುಟ-೨೩೩ ರಿಂದ ೨೩೪. ಡಾ. ಲಕ್ಕಪ್ಪಗೌಡ. ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು. ೨೦೦೦.

೬. **ಬೆರಸಿ ಇಟ್ಟೀನಬೆಲ್ಲ ನೆನಗಡಲಿ.** ಪುಟ-೯೯ ಜ್ಯೋತಿಹೊಸೂರ. ಜಾನಪದ ಮಂಟಪ ರಾಯಬಾಗ. ೧೯೬೯.

೭. ಅದೇ ಪುಟ-೯೮

೮. **ಸಂಯುಕ್ತ ಕರ್ನಾಟಕ.** ಪುಟ-೫ ದಿನಪತ್ರಿಕೆ ದಿನಾಂಕ : ೧೭-೧೧-೧೯೬೯.

೯. **ಬೆರಸಿ ಇಟ್ಟೀನಬೆಲ್ಲ ನೆನಗಡಲಿ.** ಪುಟ -೦೬ ಜ್ಯೋತಿ ಹೊಸೂರ ಜಾನಪದ ಮಂಟಪ ಪ್ರಕಾಶನ ರಾಯಬಾಗ. ೧೯೬೯.

೧೦. **ಜಾನಪದ ಸಮಾಲೋಕ.** ಪುಟ-೧೬೮ ಡಾ. ಸಿ.ಕೆ. ನಾವಲಗಿ. ಕನಕದಾಸ ಸಾಹಿತ್ಯ ಪ್ರತಿಷ್ಠಾನ ಬೆಂಗಳೂರು. ೨೦೦೩.

೧೧. **ಹೆಸರ ಹೇಳ್ತಿನಿ ಒಡಪಕಟ್ಟಿ.** ಪುಟ – ೯ ಜ್ಯೋತಿ ಹೊಸೂರ ಜಾನಪದ ಮಂಟಪ ರಾಯಬಾಗ. ೧೯೭೧.

೧೨. **ಅದೇ ಪುಟ** – ೬.

೧೩. **ಅದೇ ಪುಟ** – ೯.

೧೪. **ಅದೇ ಪುಟ** – ೧೦.

೧೫. **ಅದೇ ಪುಟ** – ೧೩.

೧೬. **ಅದೇ ಪುಟ** – ೨೩-೨೪.

೧೭. **ಜಾನಪದ ಕೈಪಿಡಿ.** ಪುಟ -೨೩೪. ಡಾ. ಲಕ್ಕಪ್ಪಗೌಡ. ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು. ೨೦೦೦.

೧೮. **ಹೆಸರ ಹೇಳ್ತಿನಿ ಒಡಪ ಕಟ್ಟಿ.** ಪುಟ-೧೦೦-೧೦೧. ಕಾಲಗತಿ ಪ್ರಕಾಶನ ರಾಯಬಾಗ. ೧೯೭೧.

೧೯. **ಅದೇ ಪುಟ** – ೧೦೧-೧೦೨.

೨೦. **ಜಾನಪದ ಸಮಾಲೋಕ.** ಪುಟ-೧೭೧-೧೭೨ ಡಾ. ಸಿ.ಕೆ. ನಾವಲಗಿ. ಕನಕದಾಸ ಸಾಹಿತ್ಯ ಪ್ರತಿಷ್ಠಾನ ಬೆಂಗಳೂರು. ೨೦೦೩.

೨೧. **ಹೆಸರ ಹೇಳ್ತಿನಿ ಒಡಪಕಟ್ಟಿ.** ಪುಟ–೨೦ ಜ್ಯೋತಿ ಹೊಸೂರ ಜಾನಪದ ಮಂಟಪ ರಾಯಬಾಗ. ೧೯೭೧.

೨೨. **ಅದೇ ಪುಟ** – ೮೪.

೨೩. **ಶಿವಶರಣರ ಕ್ರಾಂತಿಕಾರಿ ಮೌಲಿಕ ವಚನಗಳು.** ಪುಟ – ೫ ಜ್ಯೋತಿ ಹೊಸೂರ ಕಾಲಗತಿ ಪ್ರಕಾಶನ ರಾಯಬಾಗ.

೨೪. **ಅದೇ ಪುಟ** – ೬.

೨೫. **ಅದೇ ಪುಟ** – ೬.

೨೬. **ಅದೇ ಪುಟ** – ೧೦.

೨೭. **ಅದೇ ಪುಟ** – ೧೦.

೨೮. **ಅದೇ ಪುಟ** – ೧೧.

೨೯. **ದತ್ತಗೌರವ. ಪುಟ**–೧೧ : ಜ್ಯೋತಿ ಹೊಸೂರ ಕಾಲಗತಿ ಪ್ರಕಾಶನ ರಾಯಬಾಗ. ೨೦೦೪.

೩೦. **ಅದೇ ಪುಟ** – ೫.

೩೧. **ಅದೇ ಪುಟ** – ೫೯.

೩೨. **ಶಂಕರಾಭಿನಂದನ.** ಪುಟ ೭ : (ಸಂ.) ಜ್ಯೋತಿ ಹೊಸೂರ. ಶಾರ್ಪ ಬಿಜಿನೆಸ್ ಸಿಸ್ಟಮ್ ಬೆಳಗಾವಿ. ೧೯೯೯.

೩೩. **ಅದೇ ಪುಟ** – ೧೧.

೩೪. **ಸ್ನೇಹ ಸಂಪದ** : ಪುಟ– (ಸಂ.)ಜ್ಯೋತಿ ಹೊಸೂರ. ಬಿ.ಎ. ಸನದಿ ಸನ್ಮಾನ ಸಮಿತಿ ಪ್ರಕಾಶನ. ಬೆಳಗಾವಿ. ೧೯೯೬

೩೫. **ಸಾಹಿತ್ಯ ವಿಮರ್ಶೆ.** ಪುಟ–೧೧ ಡಾ. ಬಸವರಾಜ ಸಬರದ ಪಲ್ಲವಿ ಪ್ರಕಾಶನ ಗುಲ್ಬರ್ಗಾ. ೨೦೦೫.

೩೬. **ಅಂತಃಸತ್ತ್ವದ ಸಾಧಕ ಕನಕದಾಸ.** ಪುಟ–೧೩ ಜ್ಯೋತಿ ಹೊಸೂರ ಕಾಲಗತಿ ಪ್ರಕಾಶನ ರಾಯಬಾಗ. ೨೦೦೬.

೩೭. **ಅದೇ ಪುಟ** – ೧೫.

೩೮. **ಅದೇ ಪುಟ** – ೪೦.

೩೯. **ಡೊಳ್ಳಿನ ಹಾಡುಗಳ ಸಮೀಕ್ಷೆ.** ಪುಟ–೬ ಜ್ಯೋತಿ ಹೊಸೂರ ಕಾಲಗತಿ ಪ್ರಕಾಶನ ರಾಯಬಾಗ. ೨೦೦೩.

೪೦. **ಅದೇ ಪುಟ** – ೨೧.

೪೧. **ಅದೇ ಪುಟ** – ೨೯.

೪೨. **ಸತ್ಯಾನ್ವೇಷಕ ಡಾ. ಶಂಬಾ ಜೋಷಿ.** ಮುನ್ನುಡಿಪುಟ–೫. ಜ್ಯೋತಿ ಹೊಸೂರ.

ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು. ೨೦೦೦.

೪೩. **ಹಸಿರು ಕ್ರಾಂತಿ.** ದಿನಪತ್ರಿಕೆ ಪುಟ–೪. ಕೆ.ಎನ್. ದೊಡಮನಿ.

೪೪. **ಜಾನಪದ ಉಪಾಸನೆ.** ಪುಟ–೪೪ ಜ್ಯೋತಿ ಹೊಸೂರ ಕಾಲಗತಿ ಪ್ರಕಾಶನ. ೧೯೮೧.

೪೫. **ಅದೇ ಪುಟ** – ೪೫.

೪೬. **ಅದೇ ಪುಟ** – ೪೯.

೪೭. **ಅದೇ ಪುಟ** – ೫೦.

೪೮ : **ಜಾನಪದ ಕೈಪಿಡಿ.** ಪುಟ–೧೯೨. ಡಾ. ಲಕ್ಕಪ್ಪಗೌಡ. ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು. ೨೦೦೦.

೪೯. **ಜಾತಿಗಾರರ ಜಾತಕ.** ಪುಟ–೧೮. ಜ್ಯೋತಿ ಹೊಸೂರ ಕಾಲಗತಿ ಪ್ರಕಾಶನ ರಾಯಬಾಗ. ೧೯೮೫.

೫೦. **ಕನ್ನಡ ಜಾನಪದ ಗೀತೆಗಳು.** ಪುಟ–೮೯. ಡಾ. ಬಿ.ಎಸ್. ಗದಗಿನಮಠ. ೧೯೬೯.

೫೧. **ಉತ್ತರಕರ್ನಾಟಕದ ಬಯಲಾಟಗಳು.** ಪುಟ–೨೨. ಡಾ. ಬಸವರಾಜ ಮಲಶೆಟ್ಟಿ ಪ್ರಸಾರಂಗ ಕವಿ.ವಿ.ಧಾರವಾಡ. ೧೯೮೩.

೫೨. **ಜಾನಪದ ಕೈಪಿಡಿ.** ಪುಟ–೧೯. ಡಾ. ಲಕ್ಕಪ್ಪಗೌಡ ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು. ೨೦೦೦.

೫೩. **ಬುಡಕಟ್ಟು ನೆಲೆಯಲ್ಲಿ ಬೇಡರು.** ಪುಟ–೨೯ (ಸಂ.) ಡಾ. ಎನ್.ಎಂ. ಮುತ್ತಯ್ಯಾ ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೬.

೫೪. **ಜಾತಿಗಾರರ ಜಾತಕ.** ಪುಟ ೫–೬ ಜ್ಯೋತಿ ಹೊಸೂರ ಕಾಲಗತಿ ಪ್ರಕಾಶನ ರಾಯಬಾಗ. ೧೯೮೫.

೫೫. **ಕನಕದಾಸ ಜೀವನ ವಿಚಾರ.** ಪುಟ–೪ ಜ್ಯೋತಿ ಹೊಸೂರ ಕಾಲಗತಿ ಪ್ರಕಾಶನ ರಾಯಬಾಗ. ೧೯೮೩.

೫೬. **ಅದೇ ಪುಟ** – ೧೧–೧೨

೫೭. **ಅದೇ ಪುಟ** – ೧೨.

೫೮. **ಅದೇ ಪುಟ** – ೫೦.

೫೯. **ಅದೇ ಪುಟ** – ೯೬.

೬೦. **ಜಾನಪದ ಕುರಿತು.** ಪುಟ –೫ ಜ್ಯೋತಿ ಹೊಸೂರ ಕಾಲಗತಿ ಪ್ರಕಾಶನ ರಾಯಬಾಗ ೧೯೮೬.

೬೧. **ಅದೇ ಪುಟ** – ೨೫.

೬೨. **ಅದೇ ಪುಟ** – ೫೧.

೬೩. **ಅದೇ ಪುಟ** – ೫೩.

೬೪. **ಅದೇ ಪುಟ** – ೫೭.

೬೫. **ಜಾನಪದ ಕೈಪಿಡಿ**. ಪುಟ–೨೩೪. ಡಾ. ಲಕ್ಕಪ್ಪಗೌಡ ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು. ೨೦೦೦.

## ಅಧ್ಯಾಯ – ೪

# ಸಾಂಸ್ಕೃತಿಕ ನೆಲೆ

- ವೈಚಾರಿಕ ನೆಲೆ
- ಸಾಂಸ್ಕೃತಿಕ ವ್ಯಕ್ತಿತ್ವ
- ಪತ್ರಿಕಾ ನೆಲೆ
- ಸಂಘಟನಾ ನೆಲೆ

# ಅಧ್ಯಾಯ-೪:
# ಸಾಂಸ್ಕೃತಿಕ ನೆಲೆ

## ೪.೧ : ವೈಚಾರಿಕ ನೆಲೆ :

ಪ್ರಗತಿಶೀಲ ಮನೋಭಾವ ವಿಕಾಸ ಮತ್ತು ಮುಕ್ತ ವೈಚಾರಿಕತೆಗೆ ಪ್ರಚೋದನೆ, ನಡೆ, ನುಡಿಗಳ ಏಕತೆಯ ಬದುಕಿಗೆ ಪ್ರೇರಣೆಯಾಗಿದೆ. ಅಂದಶ್ರದ್ದೆ, ಅಂದಾಭಿಮಾನ ತಪ್ಪು ಗ್ರಹಿಕೆ, ಇತ್ಯಾದಿಗಳ ವಿಶ್ಲೇಷಣೆ ಮಾಡುವುದೇ ವೈಚಾರಿಕತೆಯ ಮೂಲ ನೆಲೆಯಾಗಿದೆ. ವೈಚಾರಿಕತೆ ಸಾಹಿತ್ಯವು ಪ್ರವಾಹದ ವಿರುದ್ಧ ಈಜುವ ಸಾಹಸ ಮಾಡಬೇಕಾಗುತ್ತದೆ. ಅಂಥ ಕೆಲಸವನ್ನು ಹೊಸೂರರು ಮಾಡಿದ್ದಾರೆ.

ಸಾಮಾನ್ಯವಾಗಿ 'ಸೃಜನ' ಸಾಹಿತ್ಯ ಮತ್ತು 'ಜ್ಞಾನ' ಸಾಹಿತ್ಯ (ಶಾಸ್ತ್ರ ಸಾಹಿತ್ಯ) ಈ ಎರಡು ಸಾಹಿತ್ಯದ ಗುಣಲಕ್ಷಣಗಳು ಪರಿಚಯ ಎಲ್ಲರಿಗೂ ಸಾಮಾನ್ಯವಾಗಿ ಗೊತ್ತು. ಇವುಗಳನ್ನು ಹೊರತುಪಡಿಸಿ ಬರುವ ಸಾಹಿತ್ಯ ವೈಚಾರಿಕಸಾಹಿತ್ಯ ಕಾಣಿಸಿಕೊಂಡಿದೆ. ಪ್ರಗತಿಶೀಲ ಸಾಹಿತ್ಯದ ನಂತರ ಬಂಡಾಯ ಮತ್ತು ದಲಿತ ಸಾಹಿತ್ಯದಲ್ಲಿ ನಂತರದಲ್ಲಿ ಬಂದದ್ದು ವೈಚಾರಿಕ ಸಾಹಿತ್ಯವಾಗಿದೆ ಎನ್ನುವುದು. ಕೆಲವರ ಅಭಿಪ್ರಾಯ ವಾದರೂ ವೈಚಾರಿಕತೆ ಸಾಹಿತ್ಯ ಸುಮಾರು ೧೨ನೆಯ ಶತಮಾನದಲ್ಲಿ ಇತ್ತು ಎಂಬುದನ್ನು ಹೊಸೂರರು ಸಂಪಾದಿಸಿದ 'ಶಿವಶರಣರ ಕ್ರಾಂತಿಕಾರಿ ಮೌಲಿಕ ವಚನಗಳು' ಎಂಬ ಕೃತಿಯಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

"ಜನತೆಯಲ್ಲಿಯ ವಿಚಾರಶೀಲ ಪ್ರವೃತ್ತಿಗೆ ಚಾಲನೆಕೊಟ್ಟು ಅವರಲ್ಲಿ ಅಚ್ಚ ಚಿಂತನೆಯ ಪುಟಗೊಳ್ಳುವಂತೆ ಪ್ರೇರೆಪಿಸುವ ಕ್ರಾಂತಿಕಾರಿ ಆಶಯಗಳನ್ನು ಒಳಗೊಂಡಿದೆ"[೧] ಜನರಲ್ಲಿರುವ ಮೂಢನಂಬಿಕೆ, ಅಜ್ಞಾನ, ಸಂಪ್ರದಾಯ ಕಟ್ಟಳೆ, ಮೌಢ್ಯತೆಗಳನ್ನು ಹೊಡೆದು ಓಡಿಸಲು ಈ ವೈಚಾರಿಕತೆಯ ಕೃತಿಗಳು ಅವಶ್ಯಕ ಎನ್ನುವ ಮಾತು ಸ್ಪಷ್ಟವಾಗಿದೆ. ಶಿವರಾಮ ಕಾರಂತರು ಮತ್ತು ಗೌರೀಶ ಕಾಯ್ಕಿಣಿ, ಶಂಬಾ ಜೋಷಿಯವರ ವೈಚಾರಿಕತೆ, ವಿಚಾರಶೀಲತೆ, ಪ್ರಜ್ಞೆ, ವೈಜ್ಞಾನಿಕ ಹಿನ್ನೆಲೆ, ಅನೇಕ ವೈಚಾರಿಕಗ್ರಂಥಗಳ ಓದು ಹೊಸೂರರನ್ನು ವೈಚಾರಿಕತೆಗೆ ಪ್ರೇರಣೆಯನ್ನು ನೀಡಿದೆ.

ಈ ಸಾಹಿತ್ಯ ಕುರಿತು ಒಂದೆಡೆ ಹೊಸೂರರು ಈ ಅಭಿಪ್ರಾಯ ಪಡುತ್ತಾರೆ. "ನನ್ನಲ್ಲಿ ವೈಚಾರಿಕ ಪ್ರಜ್ಞೆ ಕುದುರಲು ವಿಕಾಸಗೊಳ್ಳಲು ಎಷ್ಟೋ ಗ್ರಂಥಗಳ ಓದು ಆಸಕ್ತರೊಂದಿಗೆ ಚರ್ಚೆ, ನನ್ನಷ್ಟಕ್ಕೆ ನಾನೇ ಮಾಡಿಕೊಂಡಿರುವ ಚಿಂತನೆಯುಕ್ತ ಧ್ಯಾನ, ಇತ್ಯಾದಿಗಳಲ್ಲಿ ಕಾರಣವೆಂದು ನಂಬಿರುವೆ, ಈ ದಿಶೆಯಲ್ಲಿ ಯಾರ ನೆರವನ್ನು ಹೇಗೆ ಸ್ಮರಿಸಲಿ ಎಂಬುದು ಬಗೆಹರಿಯದ ದೊಡ್ಡ ಸಮಸ್ಯೆಯಾಗಿದೆ. ಕೌಟುಂಬಿಕ ಪರಿಸರ ಹಾಗೂ ಸಾಮಾಜಿಕ ಪರಿಸರ ಇತ್ಯಾದಿಗಳಲ್ಲಿ ನನ್ನ ಬೆಳವಣಿಗೆಯುದ್ದಕ್ಕೂ ಇಂದಿನ ನನ್ನ ನಿಲುವುಗಳಿಗೆ ಸಂಪೂರ್ಣ ತದ್ವರುದ್ದವಾಗಿದುದನ್ನು ಈಗ ಪ್ರಾಂಜಲ

ಮನಸ್ಸಿನಿಂದ ಸ್ಪಷ್ಟ ಮಾಡಬಯಸುತ್ತೇನೆ. ಹೀಗಿದ್ದರೂ ನನ್ನಲ್ಲಿ ಅನಿರ್ಬಂಧಿತ ವೈಚಾರಿಕತೆ ಹೇಗೆ ಜಾಗೃತಗೊಂಡಿತೆಂಬುದು ಈಗ ನನಗೂ ಒಂದು ಒಗಟು"[೨] ಹೊಸೂರರ ಹೇಳಿಕೆ ಅಪ್ಪಟ ಸತ್ಯವಾದದ್ದು, 'ಮಾತಿನಂತೆ ಕೃತಿ ಕೃತಿಯಂತೆ ಮಾತು' ಎಂಬ ಗಾದೆಯಂತೆ ಇವರು ತಮ್ಮ ಸಾಹಿತ್ಯ ಜೀವನವನ್ನು ಅಳವಡಿಸಿಕೊಂಡಿದ್ದಾರೆ. ವೈಚಾರಿಕ ಕೃತಿಯನ್ನು ಬರೆದು ಆ ಕೃತಿಯಂತೆಯೇ ವೈಚಾರಿಕತೆ ಜೀವನದಲ್ಲಿ ಬದುಕುವುದು ಒಂದು ವಿಶೇಷ ಸಂಗತಿಯಾಗಿದೆ.

ವಿಚಾರಶೀಲರಾದ ಹೊಸೂರರು ೨೦೦೫ ನೇ ಸಾಲಿನಲ್ಲಿ 'ಕಾಲಗತಿ' ಪ್ರಕಾಶನದಿಂದ 'ಭ್ರಮೆಗಳ ಮೇಲೆ ಬೆಳಕು' ಎಂಬ ಕೃತಿಯನ್ನು ಹೊರತಂದರು. ಈ ಕೃತಿಯು ಚಿಕ್ಕದಾದರೂ ಚೊಕ್ಕಾಗಿದೆ. ಜನಸಾಮಾನ್ಯರಿಗೆ ಅತಿ ಸರಳವಾಗಿ ಅರ್ಥಪೂರ್ಣವಾಗಿ ಅಳಿಯುವ ಈ ಕೃತಿ ಕನ್ನಡ ಸಾಹಿತ್ಯಕ್ಕೆ ವಿಶೇಷ ಕೊಡುಗೆಯಾಗಿದೆ. ಈ ಕೃತಿಯಲ್ಲಿ ಬರುವ ಲೇಖನಗಳು ಅನೇಕ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಇದರಲ್ಲಿ ಏಳು ಲೇಖನಗಳು ವಿಶಿಷ್ಠ ಪೂರ್ಣವಾಗಿವೆ.

**ವೈಚಾರಿಕ ಸಾಹಿತ್ಯದ ಸ್ವರೂಪ :**

ಸಮಾಜದಲ್ಲಿ ಅಂದಾಭಿಮಾನ ಮೌಢ್ಯ, ಅಂಧಶೃದ್ಧೆ, ತಪ್ಪ ಗ್ರಹಿಕೆ, ನಂಬಿಕೆಗಳು ಆಳವಾಗಿ ನೆಲೆನಿಂತಿರುವುದು ಕಾಣುತ್ತೇವೆ. ಅದಕ್ಕಾಗಿ ಸಾಹಿತ್ಯ ಪ್ರಕಾರಗಳಲ್ಲಿ ಒಂದಾದ ವೈಚಾರಿಕ ಸಾಹಿತ್ಯದ ಬಗ್ಗೆ ವಿಚಾರ ಚಿಂತನೆ, ತಿಳುವಳಿಕೆ ಪ್ರಜ್ಞೆ ಕುರಿತು ಈ ಸಾಹಿತ್ಯದ ಪ್ರಯೋಜನ ಕುರಿತು ವಿಮರ್ಶೆ, ಶೋಧನೆ, ನಡೆಸುವುದು ಅತೀ ಅವಶ್ಯಕವೆನಿಸುತ್ತದೆ.

"ಲಲಿತ ಸಾಹಿತ್ಯದಲ್ಲಿ ಶೈಲಿಗೆ, ರೀತಿಗೆ, ರೂಪ (Form) ಕ್ಕೆ ಹೆಚ್ಚು ಪ್ರಾಶಸ್ತ್ಯ, ಜ್ಞಾನ ಸಾಹಿತ್ಯದಲ್ಲಿ ವಿಷಯಕ್ಕೆ ಅದರ ಆಶಯಕ್ಕೆ ಹೆಚ್ಚಿನ ಪ್ರಾಶಸ್ತ್ಯ, ಇನ್ನು ವಿಚಾರ ಸಾಹಿತ್ಯದಲ್ಲಿ ? ಇದೂ ವಿಷಯ ಪ್ರಧಾನವೇ ಸರಿ. ಆದರೆ ಜ್ಞಾನ ಸಾಹಿತ್ಯದಲ್ಲಿ ನಿರೂಪಕತೆ ಹೆಚ್ಚು ಮಾತ್ರೆಯಲ್ಲಿ ಇದ್ದರೆ ವಿಚಾರ ಸಾಹಿತ್ಯದಲ್ಲಿ ನಿಯಮಕತೆ ಹೆಚ್ಚಿನ ಪ್ರಮಾಣದಲ್ಲಿ ಇರುತ್ತದೆ. ಇಲ್ಲಿ ಪ್ರತಿಪಾದನೆಗೆ ಇರುವ ಮಹತ್ವ ಇಲ್ಲ ಪ್ರಚೋದನೆಗೆ ಇರುತ್ತದೆ. ಅಲ್ಲಿ ಬೋಧನೆಗೆ ಇರುವ ಸ್ಥಾನ ಇಲ್ಲಿ ಶೋಧನೆಗೆ ಇರುತ್ತದೆ. ಅಲ್ಲಿ ವಿವೇಚನೆಗೆ ಇರುವ ಪಟ್ಟಿ ಇಲ್ಲಿ ವಿಶ್ಲೇಷಣೆಗೆ ಅಲ್ಲಿ ಉತ್ತರಕ್ಕೆ ಇರುವ ಪ್ರಾಶಸ್ತ್ಯ ಇಲ್ಲಿ ಪ್ರಶ್ನೆಗೆ ಇರುತ್ತದೆ"[೩] "ಜ್ಞಾನ ಸಾಹಿತ್ಯದ ಗುರಿ-ಮಾಹಿತಿ Information ವಿಚಾರ ಸಾಹಿತ್ಯದ ಗುರಿ-ಮಾನಸಿಕ ಮಾರ್ಪಾಟು Transformation ಅಥವಾ ಗೌಣವೆನ್ನಬಹುದಾದ ಸುಧಾರಣೆ Reformation"[೪]

ಈ ಸಾಹಿತ್ಯದಲ್ಲಿ ವಿವೇಚನೆ, ಓದಿನಿಂದ ಮಿದುಳಿನಲ್ಲಿ ಪ್ರತಿಕ್ರಿಯೆಯುಂಟು ಮಾಡುವ ಚಿಂತನೆ, ಮನಸ್ಸನ್ನು ಪ್ರೇರೆಪಿಸಿ ಪ್ರಚೋದನೆಗೊಳಿಸುವದಲ್ಲದೆ ಒಂದು ವಿಷಯದ ಹಲವು ಮುಖಗಳನ್ನು ಸೂಚಿಸುವುದು ಅಲ್ಲದೇ ನೈಜ ಸತ್ಯಗಳನ್ನು ಹೊರಹಾಕುವ

ಕೆಲಸವನ್ನು ವೈಚಾರಿಕ ಬರೆಹದ ಮರ್ಮವು ಮತ್ತು ಧರ್ಮವು ಆಗಿದೆ ಎಂದಿದ್ದಾರೆ.

ಎರಡನೇ ಹೇಳಿಕೆಯಲ್ಲಿ ಜ್ಞಾನ ಸಾಹಿತ್ಯಕ್ಕೂ ಮತ್ತು ವೈಚಾರಿಕ ಸಾಹಿತ್ಯಕ್ಕೂ ಹತ್ತಿರದ ಸಂಬಂಧವಿದೆ. ಜ್ಞಾನ ಸಾಹಿತ್ಯದಿಂದ ದೊರೆಯುವ ಸತ್ತ್ವವು ವಿವಿಧ ರೀತಿ ಕೃಷಿ ಮಾಡಿದ್ದಾಗ ಉತ್ಪಾದನೆಯಾಗುವ ಹೊಸ ಹೊಸ ವಿಚಾರಗಳು, ವೈಚಾರಿಕ ಸಿದ್ಧಾಂತಗಳು ಬೆಳಕಿನ ಬಳಕೆ ಮಾಡಿಕೊಂಡು ವೈಚಾರಿಕಸಾಹಿತ್ಯ ಹುಟ್ಟುತ್ತದೆ. ಎಂಬ ಅಭಿಪ್ರಾಯವನ್ನು ಮತ್ತು ಮೇಲಿನ ಎರಡು ಹೇಳಿಕೆಯನ್ನು ಗೌರೀಶ ಕಾಯ್ಕಿಣಿಯವರು ವ್ಯಕ್ತಪಡಿಸಿರುವುದು ಸ್ಪಷ್ಟವಾಗಿದೆ.

ಸಮಾರೋಪಗೊಳಿಸುತ್ತ ವೈಚಾರಿಕತೆ ಸಾಹಿತ್ಯದಿಂದ ಪರಂಪಾರಗತ ಜನತೆಯ, ಭಾವನೆಗಳಿಗೆ ಬಲವಾದ ಪೆಟ್ಟು ಬೀಳುವುದಂತೂ ಖಚಿತ, ಹೀಗಾಗಿ ವೈಚಾರಿಕ ಸಾಹಿತ್ಯವೆಂದರೆ ಧರ್ಮಲಂಡರ- ನಾಸ್ತಿಕರ ಸಾಹಿತ್ಯ, ಶ್ರೇಷ್ಠವಾದ ಭಾರತೀಯ ಸಂಸ್ಕೃತಿಯ ವಿನಾಶಕ ಸಾಹಿತ್ಯವೆಂಬುದಾಗಿ ಹಣೆಪಟ್ಟಿ ಕಟ್ಟಿ ಪೂರ್ವಗ್ರಹ ಪೀಡಿತರಾದ ಹಲವಾರು ಜನರು ವಿನಾಕಾರಣ ದೂಷಿಸುತ್ತಿರುವುದು ಮಾತ್ರ ವಿಷಾದನೀಯ ಇಂಥ ದೋಷಣೆ, ಅನಾದರ ಪ್ರತೀಕಾರಗಳಿದ್ದರ, ವೈಚಾರಿಕ ಸಾಹಿತ್ಯ ನಿರ್ಮಾಣಕ್ಕೆ ಕೈ ಹಾಕುವವರು ಅಲ್ಪಸಂಖ್ಯೆಯಲ್ಲಾದರೂ ಇದ್ದಾರೆಂಬುದು ಸಮಾರ್ಥದ ಸಂಗತಿ. ಅವರ ಧೈರ್ಯ ನಿಜಕ್ಕೂ ದೊಡ್ಡದು".[೫]ಈ ಮಾತುಗಳು ವೈಚಾರಿಕ ಸಾಹಿತ್ಯದ ಸ್ಥಿತಗಿತಿ, ಪ್ರವೇಶ ಮಾಡುವವರಿಗೆ ಮಾರ್ಗದರ್ಶನ, ಕಾರ್ಯ ನಿರ್ವಹಿಸುತ್ತಿರುವವರಿಗೆ ಆತ್ಮವಿಶ್ವಾಸ ತುಂಬುತ್ತದೆ. ಕನ್ನಡ ಸಾಹಿತ್ಯದಲ್ಲಿ ಇತ್ತೀಚೆಗೆ ಮೂಡಿ ಬಂದಿರುವ ಪ್ರಖರ ವೈಚಾರಿಕ ಲೇಖನವಿದು. ಎ.ಎನ್. ಮೂರ್ತಿರಾವ್, ಶಂಭಾ ಜೋಶಿ, ಗೌರೀಶ ಕಾಯ್ಕಿಣಿ, ಶಿವರಾಮ ಕಾರಂತ ಅವರ ಚಿಂತನೆಯನ್ನು ಸಮರ್ಥವಾಗಿ ಮುಂದುವರೆಸಿದವರೆಂದರೆ-ಜ್ಯೋತಿ ಹೊಸೂರ ಎಂದು ಹೇಳಬಹುದು.

'ಈ ಗುರುಮಹಿಮೆ ಬಂಡಾಟವಲ್ಲವೇ' ? ಲೇಖನವು ಭಾರತೀಯ ಪರಂಪರೆಯಲ್ಲಿರುವ 'ಗುರುಮಹಿಮೆ' ಕೀರ್ತನೆ ಗೌರವವನ್ನು ಪ್ರಸ್ತಾಪಿಸಿ, ಲೌಕಿಕ ಜೀನವದಲ್ಲಿ ಶೈಕ್ಷಣಿಕ ಬದುಕಿನಲ್ಲಿ ಗುರುವಿಗಿರುವ ಸ್ಥಾನ-ಮಾನಗಳನ್ನು ಹಂತ-ಹಂತವಾಗಿ ವಿವರಿಸಿದ್ದಾರೆ. "ವಾಸ್ತವದಲ್ಲಿ ಗುರುವಿನ ಸಾಮರ್ಥ್ಯ ಎಷ್ಟೊಂಬುದನ್ನು ಒರೆದು ನೋಡಿ, ವಿಶ್ಲೇಷಿಸಿ ಪರಿಭಾವಿಸಿದರೆ, ಆಶ್ಚರ್ಯಕಾರಕ ಪರಿಣಾಮಗಳು ಹೊರ ಹೊಮ್ಮುತ್ತವೆ. ಮತ್ತು ಗುರು ಮಹಿಮೆ ಎಷ್ಟೊಂದು ಬೊಗಳೆಯೆಂಬುದು ವಿದಿತವಾಗುತ್ತದೆ."[೬]

ಗುರುವನ್ನು ಗುರುಸ್ಥಾನವನ್ನು ವೈಭವೀಕರಿಸಿ ಅತಿಮಾನುಷಗೊಳಿಸಿರುವುದನ್ನು ಹಂತವಾಗಿ ಕಟಕಿಯಾಡಿದ್ದಾರೆ. "ಶಿಕ್ಷಣ ಇಂದಿನ ಅವನತಿಯ ಅವಸ್ಥೆಗೆ ನಮ್ಮ ಗೊಡ್ಡು ಪರಂಪರೆಯ ಪಾಲು ಎಷ್ಟಿದೆಯೆಂಬುದನ್ನು ಶಿಕ್ಷಣ ತಜ್ಞರ ಪರ್ಯಾಲೋಚಿಸಿ ನಿರ್ಧರಿಸಬೇಕು. ಲೌಕೀಕ ವಿದ್ಯೆಯ ಗುರುವೇ ಆಗಿರಲಿ, ಆಧ್ಯಾತ್ಮಿಕ ವಿದ್ಯೆಯ ಗುರುವೇ ಆಗಿರಲಿ,

ಮಠಾಧಿಪತಿಗಳು ಮತ್ತು ಭಕ್ತರೇ ಆಗಿರಲಿ ಈ ಶೈಕ್ಷಣಿಕ ಪ್ರಕ್ರಿಯೆ ಕುರಿತು ಚೆನ್ನಾಗಿ ಅರಿತುಕೊಳ್ಳಬೇಕು. ಎಲ್ಲ ಬಗೆಯ ಎಲ್ಲ ಹಂತದ ಗುರುಗಳು ತಮ್ಮ ಭ್ರಮಾಲೋಕದಿಂದ ಕೆಳಗಿಳಿದು ವಾಸ್ತವ ಲೋಕದ ಆದರಣೀಯ ಗುರುಗಳಾಬೇಕು."[೭] ಎಂಬುದು ಎಚ್ಚರಿಕೆಯ ಆಗಿದೆ. ಶಿಕ್ಷಣ ಪ್ರಕ್ರಿಯೆಯ ಜೀವ ಜೀವಾಳ ತಿಳಿದುಕೊಳ್ಳಲು, ಸ್ವಾಮಿವಿವೇಕಾನಂದರ ವಿಚಾರಗಳು ಮಾರ್ಗದರ್ಶಿಯಾಗುತ್ತವೆ. ಅವರು ಜ್ಞಾನಕ್ಕೆ ಸಂಬಂಧಿಸಿದಂತೆ ಹೇಳಿರುವ ಮಾತುಗಳನ್ನು ತಮ್ಮ ವಾದದ ಪುಷ್ಟಿಗಾಗಿ ಸಮರ್ಥವಾಗಿ ಬಳಸಿಕೊಂಡಿದ್ದಾರೆ.

ಭಾರತೀಯ ಪರಂಪರೆಯಲ್ಲಿ ಗುರುವಿಗೆ ಕೊಡಲಾಗಿರುವ ಔಚಿತ್ಯ ಮೀರಿದ ಪೂಜ್ಯಸ್ಥಾನ ಮತ್ತು ಮಾನಸೂಚಿಕ ಶ್ಲೋಕ, ಗಾದೆ, ಪದ್ಯ ಇತ್ಯಾದಿಗಳ ಆಶಯದಲ್ಲಿ ವಿಶಿಷ್ಟ ಹಿತಾಸಕ್ತಿ ಹುದುಗಿರುವುದು ವಿದಿತವಾಗುತ್ತದೆ. ಮತ್ತು ಈ ಗುರು ಮಹಿಮೆಯ ಬಂಡಾಟವೂ ಸ್ಪಷ್ಟವಾಗುತ್ತದೆ"[೮] ಈ ಮಾತುಗಳು ಪರಂಪರಾಗತ ನಂಬಿಕೆ ಬಹುದೊಡ್ಡ ಶಸ್ತ್ರಚಿಕಿತ್ಸೆ (ಆಪರೇಶನ್ ಮಾಡಿದಂತಾಗಿದೆ. ಈ ಲೇಖನದಲ್ಲಿ ಪ್ರಖರ ವೈಚಾರಿಕತೆಯು ತಾನೇ ತಾನಾಗಿ ವಿಜೃಂಭಿಸಿದೆ. ಪ್ರಜ್ಞಾವಂತರು ಮತ್ತು ಪ್ರಾಮಾಣಿಕರು ಈ ವಿಚಾರಧಾರೆಯನ್ನು ಒಪ್ಪಿಕೊಳ್ಳುತ್ತಾರೆ. ತಮ್ಮ ಮನಃಸಾಕ್ಷಿಯನ್ನು ಪ್ರಮಾಣ ವಾಗಿಸಿಕೊಂಡವರಂತೂ ಖಂಡಿತವಾಗಿಯೂ ಜ್ಯೋತಿ ಹೊಸೂರರ ವಿಚಾರ ಧಾರೆಯನ್ನು ಅನುಮೋದಿಸುತ್ತದೆ.

**ಮಾನವ ಒಂದು ಜಿಜ್ಞಾಸೆ ಮತ್ತು ಮತ-ಧರ್ಮ ಮಾನವ ಧರ್ಮ :**

ಇವರೆಡೂ ಮಾನವ ಮಾನವೀಯತೆ, ಮಾನವೀಯ ಮೌಲ್ಯಗಳು, ಮಾನವಧರ್ಮ ಮುಂತಾದ ಅಂಶಗಳ ಸುತ್ತ ಹೊಸೂರರು ಮಾಡಿದ ಜಿಜ್ಞಾಸೆಗಳಾಗಿವೆ. ಹಲವಾರು ದಶಗಳ ಚಿಂತನೆ ಇದರಲ್ಲಿ ಹರಳುಗಟ್ಟಿದೆ. ಇದರಲ್ಲಿ ಬಳಸಿದ ನೂತನ ಪುರಾತನ ಲಕ್ಷ-ಲಕ್ಷಣಗಳು, ಸಂತರ-ದಾಸರ, ಶರಣರ, ಅಭಿಪ್ರಾಯಗಳು, ಭಾರತೀಯ ಚಿಂತಕರ, ವಿದೇಶಿ ವಿದ್ವಾಂಸರ ವಿಚಾರಧಾರೆಗಳು ಬೆರೆಗುಗೊಳಿಸುತ್ತದೆ. ಎಲ್ಲವನ್ನು ಜಿಜ್ಞಾಸೆಗೆ ಒಳಪಡಿಸಿ ತಮ್ಮದೇ ಆದ ಖಚಿತ ಅಭಿಪ್ರಾಯ ಸೂಚಿಸಿರುವುದು. ಇದೂವರೆಗಿನ ಚಿಂತನೆಗೆ ಪೂರಕವಾಗಿದ್ದು, ಅದರ ಮುಂದುವರಿಕೆಯೇ ಆಗಿದೆ. ಶಂಬಾ ಚಿಂತನೆಯ ದಾರಿಯನ್ನಿಲ್ಲಿ ನಿಖರವಾಗಿ ಗುರುತಿಸಬಹುದು. ಶಂಬಾರ ಚಿಂತನೆಯ ವಿಸ್ತರಣೆ ಯಾಗಿರುವದನ್ನು ಕಾಣಬಹುದು.

"ಮಾನವಧರ್ಮ ಎಂಬುದು ವಿಶ್ವದೆಲ್ಲೆಡೆಯು ಇಡೀ ಮಾನವರಿಗೆ ಅನ್ವಯವಾಗುವಷ್ಟೆ ವಿಶಾಲತೆಯನ್ನೊಳಗೊಂಡಿದೆ. ಈ ಮಾನವ ಧರ್ಮ ಮಾತ್ರ ಜಾತಿಕ ವಿಷಮತೆಯನ್ನು ನೀಗಿಸಿ ವಿಶ್ವಶಾಂತಿ ನೆಲೆಗೊಳಿಸುವ ಸಾಮರ್ಥ್ಯ ಹೊಂದಿದೆ."[೯] "ದೇಶಾತೀತ ಮತ್ತು ಕಾಲಾತೀತ, ಶಾಶ್ವತ ಮೌಲ್ಯಗಳನ್ನು ಮತ್ತು ಪರಿಶುದ್ಧ ನೈತಿಕಾಚರಣೆಗಳನ್ನು ಜೀವನದಲ್ಲಿ ಆಳವಾಗಿಸಿಕೊಳ್ಳಲು ಮಾನವ ಧರ್ಮ

ಪ್ರೇರಣೆ ನೀಡುತ್ತದೆ. ಬಾಹ್ಯ ಪ್ರಚೋದನೆಯ ಸೆಳೆತನಗಳನ್ನು ನಿಯಂತ್ರಿಸುತ್ತದೆ."[೧೦] ಇದು ಜಾಗತಿಕ ಸ್ತರದಲ್ಲಿಯೇ ಆಗಲಿ, ಭಾರತದಲ್ಲಿಯೇ ಆಗಲಿ ಮತ–ಮತಗಳ ಪೈಪೋಟಿ ಬೇಕಾಗಿಲ್ಲ. ಇಡೀ ವಿಶ್ವದಲ್ಲಿಯ ಎಲ್ಲರನ್ನು ಅಪ್ಪಿಕೊಂಡು, ಅವರಲ್ಲಿ ಮಾನವತೆಯನ್ನು ಜಾಗೃತಗೊಳಿಸಿ ಅವರೆಲ್ಲರನ್ನು ಒಟ್ಟಾಗಿ ಬೆಸೆಯುವ ಮಾನವ ಧರ್ಮ ಮಾತ್ರ ಬೇಕು"[೧೧] ಈ ಮಾತುಗಳು ಲೇಖಕರ ಚಿಂತನೆಯ ಎರೆತ್ತರಕ್ಕೆ ನಿದರ್ಶನವಾಗಿದೆ.

'ಭಾರತೀಯ ಭ್ರಷ್ಟಾಚಾರಿಗಳ ಪ್ರೇರಣಾ ಮುಖಗಳು' ಮತ್ತೊಂದು ಚಿಂತನೆಯಿಂದೊಡಗೂಡಿದ ಬರಹ, ಭಾರತೀಯ ಸಂಸ್ಕೃತಿಯಲ್ಲಿ ಬದುಕಿನ ಎಲ್ಲ ಸ್ತರಗಳಲ್ಲಿ ಭ್ರಷ್ಟಾಚಾರ ಹಾಸು ಹೊಕ್ಕಾಗಿರುವುದನ್ನು ಈ ಲೇಖನ ಎಳೆ–ಎಳೆಯಾಗಿ ಬಿಡಿಸಿಟ್ಟಿದೆ. "ಭ್ರಷ್ಟಾಚಾರದ ಭರಾಟೆಯಿಂದಾಗಿ ದೇಶದ ಆಡಳಿತ ವ್ಯವಸ್ಥೆ ಸಮಾಜಿಕ ವ್ಯವಸ್ಥೆ, ಅರ್ಥ ವ್ಯವಸ್ಥೆ ಮತೀಯ ವ್ಯವಸ್ಥೆ, ರಾಜಕೀಯ, ವ್ಯವಸ್ಥೆ ಇತ್ಯಾದಿಗಳೆಲ್ಲ ಹದಿಗೆಟ್ಟು ಹೋಗಿವೆ."[೧೨] ಎಂಬುದು ಸ್ಪಷ್ಟವಾಗಿದೆ.

ಕ್ಷೇತ್ರದರ್ಶನ, ದೇವರ ಪೂಜಾಸ್ಥಳಗಳು ಇಂದು ಭ್ರಷ್ಟಾಚಾರ ಕೇಂದ್ರವಾಗಿರುವುದನ್ನು ಎತ್ತಿ ತೋರಿಸಿದ್ದಾರೆ. ಅಧಿಕಾರಿಗಳು ರಾಜಕಾರಣಿ, ವ್ಯಾಪಾರಿಗಳು, ಉಧ್ಯಮಿಗಳು, ನೌಕರರು, ಹೇಗೆ ಭ್ರಷ್ಟಾಚಾರಕ್ಕೆ ಯಾರು ಹೇಗೆ ಕಾರಣವಾಗಿದ್ದಾರೆ. ಶಂಕರ ಪೂಜೆ, ಸತ್ಯನಾರಾಯಣ ವೃತ, ದೇವೀ ಪೂಜೆ ನವಗ್ರಹ ಪೂಜೆ, ತಿರುಪತಿ ತಿಮ್ಮಪ್ಪನ ಹುಂಡಿ ಇಲ್ಲೆಲ್ಲ ಭ್ರಷ್ಟಾಚಾರ ಹೇಗೆ ವ್ಯಾಪ್ತಿಸಿದೆಂಬುದನ್ನು ವಿವರಿಸಿದ್ದಾರೆ. ಈ ಎಲ್ಲಾ ಬಗೆಯ ಭ್ರಷ್ಟಾಚಾರಗಳಿಗೆಲ್ಲ ಪರೋಕ್ಷವಾಗಿ ನಮ್ಮ ಸಂಪ್ರದಾಯವೇ ಮೂಲ ಕಾರಣವೆಂದು ವಿಶ್ಲೇಷಿಸಿದೆ. "ಅನಿಷ್ಟ ಸಂಪ್ರದಾಯ ಬದಲಾಯಿಸಬೇಕು ಭ್ರಷ್ಟಾಚಾರಕ್ಕೆ ಲಗಾಮು ಹಾಕಲು ನೀಡಿದ ಸಲಹೆ ಹೀಗಿದೆ."[೧೩] ಪ್ರತಿಯೊಬ್ಬ ಭ್ರಷ್ಟಾಚಾರಿಯೂ ಸಹಿತ ಇಂಥ ಕ್ರಮಗಳಿಂದ ಅವರ ಪಾಪ ನಾಶವಾಗುವದಿಲ್ಲವೆಂಬುದನ್ನು ಮೊಟ್ಟ ಮೊದಲು ಅರಿತುಕೊಳ್ಳಬೇಕಾಗಿದೆ. ಅಂಥವರು ಒಂದಿಲ್ಲ ಒಂದು ರೀತಿಯಲ್ಲಿ ತಕ್ಕ ಶಿಕ್ಷೆಯನ್ನು ನಿಸರ್ಗ ಪರಿಸರ, ಅರಿತು ಸಾಕ್ಷಿ ಇತ್ಯಾದಿ–ಇತ್ಯಾದಿಗಳಿಂದ ಅನುಭವಿಸಬೇಕಾಗುತ್ತದೆಂಬುದನ್ನು ಮರೆಯಬಾರದು. ಆದ್ದರಿಂದ "ಪ್ರತಿಯೊಬ್ಬ ಭ್ರಷ್ಟಾಚಾರಿಯೂ ತನ್ನ ಸಾಕ್ಷಿಗೆ ಕಿವಿಗೊಡುವುದನ್ನು ಕಲಿಯಬೇಕಾಗಿದೆ. ಏಕೆಂದರೆ ಮನವರಿಯದ ಕಳ್ಳತನವಿಲ್ಲ, ಸುಳ್ಳತನವಿಲ್ಲ, ವಂಚನೆಯಿಲ್ಲ, ವಾಮಾಚಾರವಿಲ್ಲ."[೧೪] ವೆಂದು ಪರಿಹಾರ ನೀಡಿರುವುದು ಯಥೋಚಿತವಾಗಿದೆ. ಭ್ರಷ್ಟಾಚಾರ ಹೋಗಬೇಕು, ಮುಕ್ತ ಸಮಾಜ ನಿರ್ಮಾಣವಾಗಬೇಕು. ಚಿಂತನೆ ಬೆಳೆದು ಸಮಾಜದಲ್ಲಿ ವೈಚಾರಿಕತೆ ಮೂಡಿ ಬರಬೇಕೆಂಬುದನ್ನು ಸಾತ್ವಿಕ ವ್ಯಕ್ತಿಯ ಸದಾಶಯವಾಗಿದೆ. ಮಾನವೀಯ ಮೌಲ್ಯಗಳ ಆರಾಧಕನ ನಿಲುವಿನಲ್ಲಿ ಗುರುತಿಸಬೇಕು.

**ಬಾಲ್ಯ ಮತದೀಕ್ಷೆ ಮತ್ತು ವ್ಯಕ್ತಿ ಸ್ವಾತಂತ್ರ್ಯ ಹಾಗೂ ಮಾನವ ಹಕ್ಕುಗಳ ಅಪಹರಣ :**

ಸ್ವಾತಂತ್ರ್ಯವು ಮಾನವರ ಜನ್ಮಸಿದ್ಧಹಕ್ಕು ಘೋಷಣೆಯ ಕಾಲಧರ್ಮದ

ಪ್ರತೀಕವಾಗಿದೆ. ಕಾಲಧರ್ಮದ ಅನಿವಾರ್ಯತೆಯೂ ಆಗಿದೆ. ಮತಧರ್ಮದ (Religion) ಮೂಲಭೂತ ಹಕ್ಕು ಪ್ರಮುಖವಾದುದು ಶ್ರೇಷ್ಠವಾದದೂ ಹೌದು ಭಾರತೀಯರೆಲ್ಲರೂ ತಮ್ಮ ಮನಸಾಕ್ಷಿಗೆ ಸರಿಯಾಗಿಸಿದ ಮತಧರ್ಮ ಅನುಸರಿಸಲು ಸರಕಾರವು ಸಂಪೂರ್ಣ ಸ್ವಾತಂತ್ರ್ಯ ಕೆಡುತ್ತದೆ. ಮೂಲಭೂತ ಹಕ್ಕುಗಳ ಮತ್ತು ಮಾನವ ಹಕ್ಕುಗಳ ಕಾರಣದಿಂದಾಗಿ ಆಧುನಿಕ ಕಾಲದಲ್ಲಿಯ ವ್ಯಕ್ತಿಗಳು ಮತಧರ್ಮದ ಕಪಿಮುಷ್ಠಿಯ ಹಿಡಿತದಿಂದ ತಾತ್ವಿಕವಾಗಿ ಮುಕ್ತರಾಗಿದ್ದಾರೆ. ಸಂವಿದಾನ ಬದ್ದವಾದ ಮೂಲಭೂತ ಹಕ್ಕುಗಳ ಕಾರಣದಿಂದಾಗಿ ಪ್ರಾಪ್ತವಾಗುವ ಮತಧರ್ಮಚಾರಗಳ ಅನುಕರಣೆಯ ಈ ಸ್ವಾತಂತ್ರ್ಯವು ಕೇವಲ ಅಂದರೆ ನಿಜವಾಗಿಯೂ ಕೇವಲವಾಗಿರುವ ತಾತ್ವಿಕ ಸ್ವಾತಂತ್ರ್ಯ ಮಾತ್ರವೆಂದೂ ವಾಸ್ತವದಲ್ಲಿ ಈ ಸ್ವಾತಂತ್ರ್ಯದ ಅಪಹರಣವೇ ಪರೋಕ್ಷವಾಗಿ ಮತ್ತು ವ್ಯವಸ್ಥಿತವಾಗಿ ಸಾಗುತ್ತಲಿದೆಯೆಂದೂ ಕಾಳಜಿಯಿಂದ ಗಮನಿಸಬೇಕಾಗಿದೆ.

"ಸ್ವತಂತ್ರ ಜೀವಿಯಾಗಿ ಮನುಷ್ಯ ಹುಟ್ಟಿದ್ದಾನೆ. ಆದರೂ ಅವನು ಎಲ್ಲೆಡೆಯಲ್ಲಿಯೂ ಬಂಧನದಲ್ಲಿದ್ದಾನೆ. [Man is born free yet every where he is in chains) ಎಂಬುದಾಗಿ ರಾಜಕೀಯ ಚಿಂತಕ 'ರೂಸೋ' ಅವರ ಘೋಷಣೆ ಮತ್ತು ಹುಟ್ಟುತ್ತಲೇ ಮುಕ್ತ ಮಾನವ ಬೆಳೆಯುತ್ತಲೇ ಕುಬ್ಜ ಮಾನವ ಎಂಬುದಾಗಿ ಹೇಳಿರುವ 'ಕುವೆಂಪು' ಅವರ ಸೂಕ್ತಿ ಇವೆರಡೂ ಒಂದೇ ಆಶಯ ಹೊಂದಿರುವುದು ಸ್ಪಷ್ಟ"[೧೫] ಈ ಪಾಶ್ಚಾತ್ಯ ಚಿಂತಕ 'ರೂಸೋ' ಮತ್ತು 'ರಾಷ್ಟ್ರಕವಿ ಕುವೆಂಪು' ಅವರು ವಿಶ್ವಮಾನ್ಯ ವಿಚಾರಗಳನ್ನುನೆಪಿಸಿಕೊಳ್ಳುವದರಿಂದ ಹೊಸ ಬೆಳಕು ಪ್ರಜ್ವಲಿಸಬಹುದಾಗಿದೆ. ಈ ವಿಷಯದ ಬಗ್ಗೆ ಚಿಂತನೆ ಮಾಡುವುದು ಅತಿ ಅವಶ್ಯಕವಾಗಿದೆ. ಮತದೀಕ್ಷೆಯ ಕುರಿತಾದ ವಿದಿ-ವಿಧಾನಗಳನ್ನು ಪರಮಾರ್ಶಿಸಬೇಕಾಗುತ್ತದೆ.

"ಪ್ರತಿಯೊಬ್ಬರೂ ತಮ್ಮ ಮನಸ್ಸಾಕ್ಷಿ ಸಮ್ಮತವಾದ ಮತಧರ್ಮವನ್ನು ಆಯ್ದುಕೊಳ್ಳುವ ಮುಕ್ತ ಸ್ವಾತಂತ್ರ್ಯವನ್ನು ಸಂವಿಧಾನದಲ್ಲಿ ಕೊಡಲಾಗಿದೆ. ವಾಸ್ತವದಲ್ಲಿ ಮಾತ್ರ ಮತಧರ್ಮದ ಆಯ್ಕೆಯ ಬಗೆಗಿನ ಪ್ರಜ್ಞೆ ಮಾಗುವ ವಯಸ್ಸಿಗಿಂತ ಮೊದಲೇ ಮತಾಚಾರದ ದೀಕ್ಷೆ ಕೊಟ್ಟು ಆ ಬಗೆಗೆ ವ್ಯಕ್ತಿಯ ವಿಚಾರಕ್ಕೆ ಮತ್ತು ಆಯ್ಕೆಗೆ ಅವಕಾಶವೇ ಸಿಗದಂತೆ ಮಾಡಲಾಗುತ್ತದೆ. ಅಂತೆಯೇ ಈ ಮತಧರ್ಮದ ದೀಕ್ಷೆಯ ಉಪಕ್ರಮವೆಂದರೆ ಮೂಲಭೂತ ಹಕ್ಕಿನ ಅಪಹರಣವೆಂದು ಹೇಳಲೇಬೇಕಾಗುತ್ತದೆ."[೧೬] ವ್ಯವಹಾರ ಮತ್ತು ಮತದಾನದ ಹಕ್ಕು ಬರಬೇಕಾದರೆ ಹದಿನೆಂಟು ವರ್ಷ ತುಂಬಬೇಕು ಎಂದು ಸಂವಿಧಾನ ಹೇಳುತ್ತದೆ. ಆದರೆ ಮತದೀಕ್ಷೆಗೆ ಮಾತ್ರ ಬಾಲ್ಯದಲ್ಲಿ ಇದನ್ನು ಸರಕಾರ ಸಂವಿಧಾನ ಚಿಂತನೆ ಮಾಡಿ ಮತದೀಕ್ಷೆಯನ್ನು ವಯಸ್ಸಿಗೆ ಬಂದ ನಂತರ ಅವನು ಯಾವ ಮತಕ್ಕೆ ಹೋಗಲು ಯೋಚಿಸುತ್ತಾನೆ. ಆ ಮತ ದೀಕ್ಷೆ ನೀಡುವ ವ್ಯವಸ್ಥೆಯಾಗಬೇಕು ಎಂಬುದೇ ಇದರ ಆಶಯವಾಗಿದೆ. ಹೀಗೆ ಮಾಡುವುದರಿಂದ ಮಾನವನ ಮೂಲಭೂತ ಹಕ್ಕು

ಅಪಹರಣವಾಗುವುದಿಲ್ಲಾ ಎಂದಿದ್ದಾರೆ.

**ಪಾದಪೂಜೆ, ಪಾದೋದಕ ಸೇವೆನ, ಅಡ್ಡಪಲ್ಲಕ್ಕಿ ಉತ್ಸವ ಮತ್ತು ಗುಲಾಮಗಿರಿ :**

ಪಾದಪೂಜೆ, ಪಾದೋದಕ ಪ್ರದಾನ, ಅಡ್ಡ ಪಲ್ಲಕ್ಕಿ ಉತ್ಸವ ಇತ್ಯಾದಿ ಪ್ರತಿಗಾಮಿ, ಉಪಕ್ರಮಗಳಿಗಾಗಿ ಅನುಯಾಯಿಗಳನ್ನು ಪೀಡಿಸುವ, ಕಾಡಿಸುವ ಮತ್ತು ಆಢ್ಯತೆಯ ಪ್ರದರ್ಶನಗಳಿಗೆ ಪೈಪೋಟಿ ಮಾಡುವವರ ಸಂಖ್ಯೆ ಮತ್ತು ಪ್ರಮಾಣ ಹೆಚ್ಚಾಗಿರುವುದು ಕಟುಸತ್ಯ ಸ್ವಾಮಿಗಳು, ಪೀಠಾಧಿಪತಿಗಳು, ದೊಡ್ಡ ಮೊತ್ತದ ದಕ್ಷಿಣೆಯನ್ನು ಮೊದಲಿಗೆ ಗೊತ್ತು ಪಡಿಸುವುದುಂಟು ಇದು ಪ್ರೀತಿಯ ಕಾಣಿಕೆಯಾಗದೇ ಒತ್ತಾಯದ ವಸೂಲಿಯೇ ಆಗಿದೆ. ಪಾದ ಪೂಜೆ ಮಾಡಿ ಪಾದೋದಕ ಸೇವನೆಯ ಅನಾರೋಗ್ಯಕಾರಿ ವಿಧಿಯನ್ನು ಅನೇಕ ವಿಚಾರವಂತ ಮತ್ತು ಆಧುನಿಕ ರೀತಿಯು ತರುಣ ತರುಣಿಯರು ನಿರಾಕರಿಸುತ್ತಲಿರುವುದು. ಬಹಿರಂಗ ಸತ್ಯ. ವೈಚಾರಿಕ ಹಿನ್ನೆಲೆಯ ಚಿಂತನಶೀಲತೆಯ ಸ್ವಾಮಿಗಳೆನಿಸಿಕೊಳ್ಳುವ ಹಂಪಿ ಶ್ರೀ ಸದಾಶಿವಯೋಗಿ ಅವರು ಬರೆದಂಥ 'ಶೈವ ತತ್ತ್ವ' (೨೦೦೪) ಹೆಸರಿನ ಚಿಕ್ಕ ಕೃತಿಯಲ್ಲಿ ಪಾದಪೂಜೆ, ಪಾದೋದಕ ಬಗ್ಗೆ ಹೊಸ ಅರ್ಥಗಳ ಬಗ್ಗೆ ಒಮ್ಮತ ಎಲ್ಲರ ಸಮ್ಮತಿ ಲಭ್ಯವಾದರೆ ಮೇಲಿನಂಥ ಪ್ರತಿಗಾಮಿ ಉಪಕ್ರಮಗಳಿಗೆ ಸಂಬಂಧಿಸಿ ಒಂದು ಬಗೆಯ ಕ್ರಾಂತಿಯನ್ನು ನೀರಿಕ್ಷಿಸಬಹುದಾಗಿದೆ.

ಪಾದ ಎಂಬುದಕ್ಕೆ ಮನಸ್ಸೆಂಬುದು ಸೂಚ್ಯಾರ್ಥ, ಪಾದಪೂಜೆ ಎಂದರೆ ಮನಸ್ಸಿನ ನಿಗ್ರಹ ಇತ್ಯಾದಿಯಾಗಿ ಅರ್ಥ ಕೊಟ್ಟು ಈ ಕೃತಿಯಲ್ಲಿ ಪ್ರತಿಪಾದಿಸಿದ್ದಾರೆ. ಅಡ್ಡಪಲ್ಲಕ್ಕಿ ಉತ್ಸವಗಳು ಅಲ್ಲಲ್ಲಿ ಅಪರೂಪವಾಗಿ ಜರುಗುತ್ತಲಿದ್ದರೂ ಅವುಗಳಲ್ಲಿಯ ವೈಭವ ಆಢ್ಯತೆ ಮತ್ತು ಪ್ರಚಾರದ ಅಬ್ಬರಗಳು ಮಾತ್ರ ತಾರಕಕ್ಕೆ ಏರುತ್ತಲಿರುವುದುಂಟು ಇತ್ತೀಚೆಗೆ ಜರುಗಿದ ಅಡ್ಡಪಲ್ಲಕ್ಕಿ ಮಹೋತ್ಸವದ ಆನಂತರದಲ್ಲಿ ಅದು ಗುಲಾಮಗಿರಿಯ ದ್ಯೋತಕವೆಂದೂ ಮಾನವ ಹಕ್ಕುಗಳ ಉಲ್ಲಂಘನೆಯ ಕಾರ್ಯವೆಂದೂ ವಿಚಾರವಾದಿ ಸಾಹಿತಿಗಳ ಪ್ರಜ್ಞಾವಂತಿಕೆಯ ವ್ಯಕ್ತಿಗಳ ಸಂಖ್ಯೆ ಇಲ್ಲದಿರುವುದು ಮಾತ್ರ ವಿಷಾದನೀಯ ವಿಧ್ಯಮಾನ. ಪಾದಪೂಜೆ, ಪಾದೋದಕ, ಸೇವನೆ, ಮತ್ತು ಅಡ್ಡ ಪಲ್ಲಕ್ಕಿ ಮಹೋತ್ಸವ ಇವುಗಳ ಬಗ್ಗೆ ಜನತೆ ಸಮಾಜದಲ್ಲಿ ಜಾಗೃತಿ, ಪ್ರಚೋದನೆ ಹೆಚ್ಚಾಗಬೇಕು ಎಂಬುದು ಹೊಸೂರರ ಬಯಕೆಯಾಗಿದೆ.

ಈ ಪುಸ್ತಕ ಓದಿ ಕೆಳಗಿರಿಸಿದರೂ ವಿಚಾರ, ಅಲೋಚನೆ, ಚಿಂತನೆ, ಮುಗಿಯುವುದಿಲ್ಲ. ಬೇರೆ ಬೇರೆ ನಿಟ್ಟಿನಿಂದ ತೂರಿಬರುತ್ತದೆ. ಓದುಗರನ್ನು ಕಾಡುವುದು. ನಿದ್ದೆಗೆಡಿಸುವುದು ಚಿಂತಿಸಲು ಹಚ್ಚುವುದು. ಶ್ರೇಷ್ಟ ಸಾಹಿತ್ಯದ ಲಕ್ಷಣವಾಗಿದೆ. ಈ ನಿಟ್ಟಿನಲ್ಲಿ 'ಭ್ರಮೆಗಳ ಮೇಲೆ ಬೆಳಕು' ಶ್ರೇಷ್ಠ ಚಿಂತನಶೀಲ ಕೃತಿಯಾಗಿದೆ. ಈ ಕೃತಿಯು ಜನತೆಯಲ್ಲಿಯ ವಿಚಾರಶೀಲ ಪ್ರವೃತ್ತಿಗೆ ಚಾಲನೆ ಕೊಟ್ಟು ಅವರಲ್ಲಿ ಅಚ್ಚ ಚಿಂತನೆಯು ಪುಟಗೊಳ್ಳುವಂತೆ ಪ್ರೇರೇಪಿಸುವ ಕ್ರಾಂತಿಕಾರಿ ಆಶಯಗಳನ್ನು ಒಳಗೊಂಡಿದೆ. ಹೀಗಾಗಿ ಅನಾಹುತಕಾರಿ

ಪ್ರವಾಹದ ವಿರುದ್ಧ ಈಜುವ ಸಾಹಸ ಬಿಂಬಿಸುವ ಕೃತಿಯೊಂದು ಇದನ್ನು ಪರಿಗಣಿಸಬೇಕಾಗುತ್ತದೆ ಎಂಬುದು ನೈಜವಾಗಿದೆ. ಈ ಕೃತಿಯ ಎಲ್ಲ ಲೇಖನಗಳಲ್ಲಿ ಹಂತ ವಿಶ್ಲೇಷಣೆಯಿದ್ದು, ಸತ್ಯಾನ್ವೇಷಣೆಯ ಪಥದಲ್ಲಿ ಸಾಗಿದ ಹೆಜ್ಜೆಗುರುತುಗಳನ್ನು ನಿಚ್ಚಳವಾಗಿ ಗುರುತಿಸಬಹುದಾಗಿದೆ.

**೪.೨. ಸಾಂಸ್ಕೃತಿಕ ವ್ಯಕ್ತಿತ್ವದ ಅನಾವರಣ :**

ಕನ್ನಡ ಸಾಹಿತ್ಯ ಇತಿಹಾಸದಲ್ಲಿ ಜೀವನ ಚರಿತ್ರೆಗಳ ಬಗ್ಗೆ ವಿಶೇಷವಾದ ಸ್ಥಾನಮಾನ ಕಾಣುತ್ತೇವೆ. ರಾಜಮಹಾರಾಜರು ತಮ್ಮ ಆಸ್ಥಾನಕವಿಗಳ ಮುಖಾಂತರ ತಮ್ಮ ಜೀವನ ಚರಿತ್ರೆಗಳನ್ನು ಚಿತ್ರಿಸಿರುವುದನ್ನು ಕಾಣುತ್ತೇವೆ. ಮಹಾಕವಿ ರನ್ನನು 'ಅತ್ತಿಮಬ್ಬೆ' ಯ ಕುರಿತಾಗಿ 'ಅಜಿತಪುರಾಣ'ದಲ್ಲಿ ಚಿತ್ರಿಸಿದ್ದು, ಇದಕ್ಕೆ ನಿದರ್ಶನವಾಗಿದೆ. ಹರಿಹರನ 'ಬಸವರಾಜ ದೇವರ ರಗಳೆ' ಹಾಗೂ ಇನ್ನಿತರ ನೂತನ ರಗಳೆಗಳು, 'ರಾಘವಾಂಕನ' 'ಹರಿಹರ ಮಹತ್ವ' 'ಸಿದ್ದನಂಜೇಶನ ರಾಘವಾಂಕ ಚಾರಿತ್ರ್ಯ' ಮುಂತಾದವುಗಳು ಜೀವನ ಚರಿತ್ರೆಯ ಕೆಲ ಮಾದರಿಗಳು ಹೊಸಗನ್ನಡ ಸಾಹಿತ್ಯದಲ್ಲಿ 'ಜೀವನದ ಚರಿತ್ರೆ' ಯೆಂಬ ಪ್ರತ್ಯಕವಾದ ಸಾಹಿತ್ಯ ರೂಪ ಬೆಳೆದು ಬಂದಿರುವುದನ್ನು ಗುರುತಿಸಲಾಗಿದೆ. ಸ್ವತಂತ್ರ ಪ್ರಕಾರ ವೆಂದು ಗುರುತಿಸಿಕೊಳ್ಳವಷ್ಟು ಇದು ಸಮೃದ್ಧವಾಗಿ ಮೂಡಿ ಬಂದಿದೆ. ಕನ್ನಡ ಪರಂಪರೆಯಲ್ಲಿಯೇ ಜ್ಯೋತಿ ಹೊಸೂರ ಅವರು ರಚಿಸಿರುವ ಜೀವನ ಚರಿತ್ರೆಗಳು ಪ್ರಕಟವಾಗಿವೆ. ಸತ್ಯಾನ್ವೇಷಕ ಡಾ. ಶಂಬಾ ಜೋಷಿ ಜೀವನ ಮತ್ತು ಕೃತಿಗಳ ಸಮಗ್ರ ಪರಿಚಯ, ಸಾತ್ವಿಕ ಸಾಹಿತಿ ಡಾ. ಬೆಟಗೇರಿ ಕೃಷ್ಣಶರ್ಮ ಜೀವನ ಕಾರ್ಯಗಳ ನಿರೂಪಣೆ, ಸೇವಾಭಾವದ ಹೋರಾಟಗಾರ ಶ್ರೀ ಜಿ.ಎಸ್. ಹಿಟ್ಟಣಗಿ ಅಜ್ಜನ ಜೀವನ ಚರಿತ್ರೆ, ಬೀರಪ್ಪ ದೇವನ ಉಪಾಸಕರ ಮಾದರಿಗಳು ಮತ್ತು ಕ್ಷೇತ್ರಗಳು ಪ್ರಮುಖವಾಗಿದೆ.

**ಸತ್ಯಾನ್ವೇಷಕ ಡಾ. ಶಂಬಾ. ಜೋಷಿ ಜೀವನ ಮತ್ತು ಕೃತಿಗಳು :**

ಕನ್ನಡ ಪುಸ್ತಕ ಪ್ರಾಧಿಕಾರವು ೨೦೦೦ ದಲ್ಲಿ ಪ್ರಕಟಿಸಿದ ಗ್ರಂಥವಿದು ಡಾ. ಶಂಬಾ ಜೋಷಿಯವರು ಕನ್ನಡ ಲೋಕಕಂಡ ಅಪರೂಪದ ಸಂಸ್ಕೃತಿ ಶೋಧಕರಲ್ಲಿ ಅಗ್ರಗಣ್ಯರು ಅವರ ಸಂಶೋಧನೆಯ ಆಳ ಮತ್ತು ವಿಸ್ತಾರಗಳು ಬೆರಗುಗೊಳಿಸುವಂತಿವೆ. ಇತಿಹಾಸ ಪ್ರಾಕ್ತನಶಾಸ್ತ್ರ, ವಂಶಚರಿತ್ರೆ, ಉತ್ಖನನ, ಶೋಧನೆ ಭಾಷಾ ಚರಿತ್ರೆ, ಭೂಗೋಳ, ವಿಜ್ಞಾನ, ವ್ಯಕ್ತಿ ಜೀವನಗಳು, ಕಲಾ ಜಗತ್ತು ಮುಂತಾದವುಗಳ ಪ್ರಚಂಡ ಪರಿಜ್ಞಾನ ಇದ್ದವರು ಮಾತ್ರ ಸಂಶೋಧನೆಯ ಗಂಭೀರ ಸಾಗರವನ್ನು ದುಮುಕಿದರು. ಇತಿಹಾಸ ಸತ್ಯಗಳ ಮುತ್ತುಗಳನ್ನು ಎತ್ತಿ ತರಬಲ್ಲ ಶಕ್ತಿಯನ್ನು ಪಡೆಯುತ್ತಾರೆ. "ಸುಮಾರು ನಾಲ್ಕು ಸಾವಿರಕ್ಕೂ ಹೆಚ್ಚು ಪುಟಗಳ ಗಂಭೀರ ಮತ್ತು ಗಟ್ಟಿ ಬರವಣಿಗೆಯನ್ನು ಮಾಡುವ ಮೂಲಕ ಕನ್ನಡ ಸಂಶೋಧನೆಯ ಚರಿತ್ರೆಯಲ್ಲಿ ಅಗ್ರಗಣ್ಯ ಸ್ಥಾನವನ್ನು ಪಡೆದ ಡಾ. ಶಂಬಾ ಜೋಷಿಯವರ ಸಮಗ್ರ ಬರವಣಿಗೆಯನ್ನು ಆರು ಸಂಪುಟಗಳಲ್ಲಿ ಕನ್ನಡ

ಪುಸ್ತಕ ಪ್ರಾಧಿಕಾರವು ಪ್ರಕಟಿಸಿದೆ. ಈ ಸಂಪುಟಗಳಿಗೆ ಪೂರಕವಾಗಿ ಅವರ ಜೀವನ ಕುರಿತು ಕೃತಿಯೊಂದನ್ನು ಪ್ರಕಟಿಸಬೇಕೆಂದು ಶಂಬಾ ಸಂಪುಟದ ಸಲಹಾ ಮಂಡಳಿ ಸೂಚಿಸಿದ ಮೇರೆಗೆ ಜೀವನ ಚರಿತ್ರೆಯನ್ನು ಪ್ರಕಟಿಸಲಾಗುತ್ತಿದೆ."[೧೭] ಎನ್ನುವ ಮಾತು ಪ್ರಕಟನೆಯ ಹಿನ್ನೆಲೆಯನ್ನು ವಿವರಿಸುತ್ತದೆ.

ಡಾ. ಶಂಬಾ ಜೋಷಿ ಅವರು ಅನನ್ಯ ಸಾಮರ್ಥ್ಯದ ಸತ್ಯಾನ್ವೇಷಕರಾಗಿದ್ದರು. ಪ್ರತಿಭೆ, ಪಾಂಡಿತ್ಯ ಮುಕ್ತ ವೈಚಾರಿಕತೆ ವಿವೇಕಪ್ರಜ್ಞೆ ಈ ನಾಲ್ಕು ಪ್ರಮುಖ ಶಕ್ತಿಗಳ ಸ್ಪರ್ಧಾತ್ಮಕ ಸಮ್ಮೇಳನದಿಂದ ಅವರೊಬ್ಬ ಅಪ್ರತಿಮ ವಿದ್ವಾಂಸರಾಗಿದ್ದರು. ತಮ್ಮ ದಿನನಿತ್ಯದ ನಡೆನುಡಿಗಳಲ್ಲಿ ಸಂಪೂರ್ಣವಾದ ಏಕತೆಯನ್ನು ಇಡೀ ಜೀವಮಾನದುದ್ದಕೂ ಅವಳಡಿಸಿಕೊಂಡಿದ್ದ ಅವರು ಒಬ್ಬ ನಿಜಮಾನವರಾಗಿದ್ದರು. ವಾಸ್ತವ ಜೀವನದಲ್ಲಿ ಅವರೊಬ್ಬ ಅನಧೀಕೃತವಾದ ಋಷಿಯಾಗಿದ್ದರು. ಡಾ ಶಂಬಾ ಜೋಷಿ ಅವರ ಸಾಂಸ್ಕೃತಿಕ ಸತ್ಯಾನ್ವೇಷಣೆಯ ಫಲಿತಾಂಶಗಳ ಕ್ರಮೇಣ, ನಾಡು, ದೇಶ ಗಡಿಗಳನ್ನು ದಾಟಿ, ಜಾಗತಿಕ ವ್ಯಾಪ್ತಿಯನ್ನು ಹೊಂದಿದ್ದವು. ಯಾವುದೇ ಬಗೆಯ ಭೇದ ಭಾವಗಳಿಲ್ಲದೆ ಇಡೀ ಮಾನವತೆಯ ಹಿತಸಾಧನೆ ಅವರ ಸತ್ಯಾನ್ವೇಷಣೆಗಳ ಮುಖ್ಯ ಗುರಿಯಾಗಿತ್ತು. ಲೇಖಕರ ಈ ಮಾತುಗಳು ಶಂಬಾ ಅವರ ವ್ಯಕ್ತಿತ್ವವನ್ನು ಅನಾವರಣಗೊಳಿಸುತ್ತವೆ.

ಶಂಬಾ ಅವರ "ತಮ್ಮ ಸತ್ಯಾನ್ವೇಷಣೆಯ ಕಾರ್ಯಕ್ಕಾಗಿ ವ್ಯಾಪಕ ಅಧ್ಯನ ಚಿಂತೆನಗಳ ಬಲದಿಂದ ವಿಶಾಲ ವ್ಯಾಪ್ತಿಯ ಅರ್ಥಗ್ರಹಣ ಪದ್ಧತಿ ಅರ್ಥಾತ್ ಸಂಶೋಧನ ಪದ್ಧತಿ (methodology) ಒಂದನ್ನು ಡಾ. ಶಂಬಾ ಜೋಷಿಯುವರು ರೂಪಸಿಕೊಂಡಿದ್ದರು. ಮೂಲಭೂತ ಸಮಸ್ಯೆಯ ಬಗೆಗಿನ ಸತ್ಯಾನ್ವೇಷಣೆಯ ಸಲುವಾಗಿ ಬಳಸಿಕೊಂಡ ಸಾಮುಗ್ರಿಗಳ ಅಧ್ಯಯನ, ಮಂಥನದಿಂದ ಉಪಲಬ್ಧವಾಗುವ ಫಲಿತಾಂಶವನ್ನು, ಇನ್ನಿತರ ಕೆಲವು ಮಹತ್ವದ ಜ್ಞಾನ ಶಾಖೆಗಳಿಂದ ದೊರೆಯುವ ಮಾಹಿತಿಯ, ಸಹಾಯದಿಂದ ತಾಳೆ ಮಾಡಿ ನೋಡುವ ಮೂಲಕ ಪರೀಕ್ಷಿಸುವ ರೀತಿಯೇ ಅವರ ಆ ಪದ್ಧತಿಯ ವಿಶೇಷತೆಯಾಗಿತ್ತು. ಅವರ ಆ ವಿಶೇಷ ರೀತಿಗೆ ಸಮಗ್ರ ಸಂಶೋಧನ ಪದ್ಧತಿ ಎಂಬುದಾಗಿ ಹೆಸರಿಸಬಹುದು"[೧೮] ಎನ್ನುವುದು ಅವರ ಸಾಧನೆಯನ್ನು ವಿವರಿಸುತ್ತದೆ. ಸತ್ಯಾನ್ವೇಷಕ ಡಾ ಶಂಬಾ ಜೋಶಿಯವರ ಕೃತಿ, ೧೯೦ ಪುಟಗಳ ವ್ಯಾಪ್ತಿಯ ಮಧ್ಯಗಾತ್ರದ ಕೃತಿ ಇದರಲ್ಲಿ ಪ್ರಧಾನವಾಗಿ ಎರಡು ಧಾರೆಗಳು ಪ್ರವಹಿಸಿವೆ. ಮೊದಲ ಧಾರೆಯಲ್ಲಿ ಜೀವನ ವಿದ್ದರೆ : ಎರಡನೇಯ ದರದಲ್ಲಿ ಅವರ ಕೃತಿಗಳ ಸಮೀಕ್ಷೆಯಿಂದ ಮೂರನೇಯದು 'ಅನುಬಂಧ' ವಾಗಿದೆ.

ಶಂಬಾ ಅವರೊಂದಿಗೆ ಕಾಲ ಶತಮಾನದ ನಿಕಟಸಂಪರ್ಕ ಅವರೊಡನೆ ಇರುವ ಒಡನಾಟದಿಂದಾಗಿ, ಬದುಕಿನೆಲ್ಲ ಸೂಕ್ಷ್ಮಗಳನ್ನು ಪ್ರಮುಖ ಪ್ರಸಂಗಗಳಾಗಿ ಜ್ಯೋತಿ ಹೊಸೂರ ಅವರು ಸೊಗಸಾಗಿ ಸೆರೆಹಿಡಿದ್ದಾರೆ. ಶಂಬಾ ಅವರಿಗೆ ಏನಾದರೊಂದು

ನೆನಪು ಉಳಿಯುವ ಮಹತ್ವದ ಕಾಣಿಕೆ ಕೊಡುವ ಸದಿಚ್ಛೆ ಅವರ ಬಂಧುಗಳದು ಬಟ್ಟೆ ಬಂಗಾರ ಲೌಕಿಕದ ಆಕರ್ಷಣೆ ಶಂಬಾ ಅವರಿಗಿಲ್ಲ. ಏನೂ ಕೇಳಿದರೂ ಬಂಧುಗಳು ಮುಂದೆ ಬಂದರೂ ಶಂಬಾ ಕೇಳಿದ್ದೇನು ಗೊತ್ತೆ ? 'ಊಹಿಸಲು ಯಾರಿಗೂ ಸಾಧ್ಯವಿಲ್ಲ Eneyclopaedia Britaniea ಪ್ರಸಿದ್ದ ಕೋಶದ ಸಮಗ್ರ ಸಂಪುಟ ಕೊಡಿಸಲು ಕೇಳುತ್ತಾರೆ. ಅದನ್ನು ಕೊಳ್ಳಬೇಕೆಂದು ಬಯಕೆ ಇದ್ದರೂ ಶಂಬಾರಿಗೆ ಸಾಧ್ಯವಾಗಿರಲಿಲ್ಲ. ಅಂದಿನ ಅದರ ಬೆಲೆಯಲ್ಲಿ ಆಗಿನದರದ ಪ್ರಕಾರ ಕನಿಷ್ಠ ಐದಾರು ತೊಲೆ ಬಂಗಾರ ಕೊಳ್ಳಲು ಸಾಧ್ಯವಿತ್ತು. ಆ ಸಂಪುಟಗಳು ಶಂಬಾ ಅವರ ಸಂಶೋಧನೆಗೆ ದಾರಿದೀಪವಾದವು. "ಈ ಶಂಬಾ ನಮ್ಮ ಕಾಲದ ಒಬ್ಬ ಮಹಾಮಾನವ, ಮಾನವ ಸಾಂಸ್ಕೃತಿಯ ಸತ್ಯಾನ್ವೇಷಕ"[೧೯] ಎಂದು ಉದ್ಗರಿಸಿದ್ದು ಸ್ವಾಭಾವಿಕವಾಗಿದೆ.

ಎರಡನೆಯ ಲೇಖನವು ಸತ್ಯಾನ್ವೇಷಣೆಯ ವ್ಯಾಪ್ತಿಯಾಗಿದೆ. ಕನ್ನಾಡು, ಕನ್ನುಡಿ, ಕನ್ನಡ ಸಂಸ್ಕೃತಿ ಹಾಗೂ ಭಾರತೀಯ ಸಂಸ್ಕೃತಿ, ನಮ್ಮ ದೇವ ಪ್ರತಿಮೆಗಳು, ಭಾಷಿಕ ಪ್ರತಿಮೆಗಳು ಇವೆಲ್ಲವುಗಳ ಮೂಲ ಚೂಲ ಮತ್ತು ಅಂತರಾರ್ಥ ಇತ್ಯಾದಿ ಸೂಕ್ಷ್ಮಗಳ ಅಧ್ಯಯನ ಮಾಡಬಯಸುವವರೆಲ್ಲ ಶಂಬಾ ಅವರ ಕೃತಿಗಳನ್ನು ಮತ್ತು ರೂಪಿಸಿದ ಅರ್ಥಗ್ರಹಣ ಪದ್ಧತಿಯನ್ನು ಕಾಳಜಿಯಿಂದ ಪರಿಶೀಲಿಸಬೇಕು ಎಂದು ಹೇಳಿರುವುದು. ಸೂಕ್ತವಾಗಿದೆ. ಶಂಬಾರವರ ಸಂಶೋಧನೆಯ ಸಾರವನ್ನು ಹೊಸೂರರು ಸಂಗ್ರಹಿಸಿದ್ದು ಹೀಗೆ "ಡಾ. ಶಂಬಾ ಅವರ ಸಾಂಸ್ಕೃತಿಕ ಸತ್ಯಾನ್ವೇಷಣೆಯು ಕೊನೆಯ ಹಂತದಲ್ಲಿ ಇಡೀ ಮಾನವೀಯತೆಯಡೆಗೆ ಸಾಗಿ ನೆಲೆಗೊಂಡಿತು. ಅದು ಕನ್ನಡು–ನುಡಿ, ಭಾರತ ದೇಶಗಳ ಎಲೆ ದಾಟಿ, ಇಡಿ ಜಾಗತಿಕ ಸಂಸ್ಕೃತಿಗಳ ಅಧ್ಯಯನ ವ್ಯಾಪ್ತಿಯನ್ನು ಹೊಂದಿದೆ. ಇಡೀ ಮಾನವತೆಯನ್ನೆಲ್ಲ ತನ್ನ ತೆಕ್ಕಯಲ್ಲ ತೆಗೆದುಕೊಂಡ ಮಾನವಧರ್ಮ ಮಾನವನೊಂದಿಗೆ ರೂಪಗೊಂಡಿದೆ. ಕಂನಾಡಿನ ಈ ವರಪುತ್ರ ಭಾರತೀಯ ಗಡಿದಾಟಿ ಜಾಗತಿಕ ವ್ಯಾಪ್ತಿಯ ವಿಷಯಗಳನ್ನು ಕುರಿತು ಸತ್ಯಾನ್ವೇಷಣೆ ಮಾಡಿ ಗ್ರಂಥಗಳನ್ನು ರಚಿಸಿರುವುದು ಅಪರೂಪದ ಮತ್ತು ಅನನ್ಯ ಕಾರ್ಯವಾಗಿದೆ."[೨೦] ಎಂದು ಜ್ಯೋತಿ ಹೊಸೂರ ಸೂತ್ರಿಕರಿಸಿದ್ದಾರೆ.

ಮೂರನೆಯ ಲೇಖನದಲ್ಲಿ ಮನ್ನಣೆ ಪ್ರಶಸ್ತಿ ಗೌರವಗಳನ್ನು ವಿವರಿಸಿದ್ದಾರೆ. "ಕನ್ನಡ ಸರ್ವಶ್ರೇಷ್ಠ ಸಾಹಿತಿಯೊಬ್ಬರಿಗೆ ಸಿಗಬಹುದಾದ ಗೌರವ ಡಾಕ್ಟರೇಟ ಪದವಿ, ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಮುಂತಾದ ಪ್ರಮುಖ ಮನ್ನಣೆಗಳನ್ನೆಲ್ಲ ತಡವಾಗಿಯಾದರೂ, ಡಾ.ಶಂಬಾ ಜೋಶಿ ಪಡೆದರು. ಇದಕ್ಕೆ ಅವರ ಕೃತಿಗಳಲ್ಲಿಯ ಸತ್ವದ ಹಿರಿಮಗಳೇ ಸಂಪೂರ್ಣ ಕಾರಣಗಳೆಂಬುದು ಸ್ಪಟಿಕ ಸ್ಪಷ್ಟ. ಈ ಮನ್ನಣೆಗಳಲ್ಲಿ ದೊರೆತದ್ದು ಅವರ ವಯಸ್ಸಿನ ೭೫ ವರ್ಷಗಳ ಅನಂತರವೇ ಎಂಬುದು ಚಿಂತನಾರ್ಹವಾದ ವಾಸ್ತವ".[೨೧] ವೆಂದು

ಹೊಸೂರರ ಮಾತು ಹತ್ತು ಹಲವು ಧ್ವನಿಪದರಗಳನ್ನು ಒಡಲೊಳಗೆ ಬಿಚ್ಚಿಕೊಂಡಿವೆ. ಪ್ರಶಸ್ತಿ ಪುರಸ್ಕಾರಕ್ಕಾಗಿ ನಡೆಯುವ ತೀವ್ರ ಲಾಬಿ ಸಮಕಾಲೀನ ಸಂದರ್ಭದಲ್ಲಿ ನಡೆಯುವ ಕಸರತ್ತುಗಳು, ವಾಕರಿಕೆಯ ಪ್ರಸಂಗಗಳು ಮನಸ್ಸಿನಲ್ಲಿ ಸುಳಿದು ಹೋಗಬಹುದು. ಇವನ್ನೆಲ್ಲ ನೆನಸಿದಾಗ, ಶಂಬಾರ ವ್ಯಕ್ತಿತ್ವ ಏರೆತ್ತರವಾಗಿ ಗೋಚರಿಸುತ್ತದೆ.

ಎರಡನೆಯ ಭಾಗವು ಡಾ. ಶಂಬಾ ಜೋಶಿಯವರ ಬರೆಹವನ್ನು ಅದರ ವಿಶೇಷತೆಯನ್ನು ನಿರೂಪಿಸುತ್ತದೆ. ಪೀಠಿಕೆಯಲ್ಲಿ ಶಂಬಾ ಅವರ ಸಾಹಿತ್ಯದ ಪಕ್ಷಿ ನೋಟವಿದೆ ಜೀವನ ಚರಿತ್ರೆಗಳು ಅಧ್ಯಯನದಲ್ಲಿ ಶಂಬಾ ಚಿತ್ರಿಸಿದ ಅರವಿಂದರ (೧೯೨೧) ಚರಿತ್ರೆ ಮತ್ತು ಲೋಕಮಾನ್ಯ ಟಿಳಕರ (೧೯೩೨) ಚರಿತ್ರೆಯನ್ನು ಸ್ಥೂಲವಾಗಿ ಪರಿಚಯಿಸಿದ್ದಾರೆ. ಕನ್ನಡ ನುಡಿ ಸಂಸ್ಕೃತಿ ಸಂಶೋಧನೆಯ ಪ್ರಚೋದನೆ ಮತ್ತು ಕೃತಿಗಳು ತುಂಬ ಸಾರವತ್ತಾದ ಲೇಖನ. ಇದರಲ್ಲಿ ಶಂಬಾರ ಸಂಶೋಧನೆ, ಅವುಗಳ ಸಾರ ಪ್ರಮುಖ ಕೃತಿಗಳ ಪರಿಶೀಲನೆಯಿಂದ ಕಣ್ಮರೆಯಾದ ಕನ್ನಡದ ಸಂಸ್ಕೃತಿಯನ್ನು ಎತ್ತರಕ್ಕೆರಿಸಿದ್ದಾರೆ. 'ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ' ಎಂಬ ಕೃತಿಗೆ ಭಾರತ ಸರಕಾರದ ಕೇಂದ್ರ ಸಾಹಿತ್ಯ ಅಕಾಡೆಮಿಯು ಪ್ರಶಸ್ತಿಯ ಪುರಸ್ಕಾರವನ್ನು ೧೯೭೦ ರಲ್ಲಿ ಪಡೆದುಕೊಂಡಿತು. ಎನ್ನವಲ್ಲಿ ಕೃತಿಯ ವಿಷಯ ಅದರ ಸತ್ತ್ವ, ಸಂಶೋಧನಾ ಮಾದರಿ, ಅದಕ್ಕೆ ದೊರೆತ ಮನ್ನಣೆ, ಲಭಿಸಿದ ಪ್ರಶಸ್ತಿ ಎಲ್ಲವುಗಳನ್ನು ಚಿಕ್ಕದಾಗಿ ಅಷ್ಟೆ ಚೊಕ್ಕದಾಗಿ ಹೊಸೂರರ ನಿರೂಪಿಸಿದ್ದಾರೆ. ಪ್ರಸ್ತುತ ಪುಸ್ತಕದ ಮೂರನೆಯ ಭಾಗ – 'ಅನುಬಂಧ' ತುಂಬ ಮಹತ್ವದ ದಾಖಲೆಗಳನ್ನು ಕಟ್ಟಿಕೊಡವುದು ಗಮನಾರ್ಹ ಅಂಶವಾಗಿದೆ. ಇದರಲ್ಲಿ ಶಂಬಾ ಜೋಷಿ, ಜೀವನದ ಮುಖ್ಯ ಘಟನೆಗಳು, ಕೃತಿಗಳು ಹೀಗೆ ನಾಲ್ಕು ಲೇಖನಗಳು ಮೌಲಿಕ ಮಾಹಿತಿಯನ್ನು ಒಳಗೊಂಡಿದೆ. ಹೀಗೆ ಒಂದು ಪರಿಪೂರ್ಣ ಜೀವನ ಚರಿತ್ರೆ ಹೇಗಿರಬೇಕು. ಎಂಬುದನ್ನು ಈ ಕೃತಿ ನಿದರ್ಶನವಾಗಿದೆ. ಜ್ಯೋತಿಹೊಸೂರ ಅವರ ಪರಿಶ್ರಮ ವಿಷಯ ಸಂಗ್ರಹ, ವ್ಯವಸ್ಥಿತ, ವಿಂಗಡನೆ, ವೈಚಾರಿಕ ವಿಶ್ಲೇಷಣೆ, ವಿದುರ್ಶಾತ್ಮಕ ಮತ್ತು ವಿಶ್ಲೇಷಣಾತ್ಮಕ ಅಂಶಗಳಿಂದ ಕನ್ನಡ ಸಾಹಿತ್ಯದ ಜೀವನ ಚರಿತ್ರೆಯಲ್ಲಿ ಇದಕ್ಕೊಂದು ವಿಶೇಶವಾದ ಸ್ಥಾನಮಾನವಿದೆ.

ಕನ್ನಡ ಪುಸ್ತಕ ಪ್ರಾಧಿಕಾರ ಇಂಥದೊಂದು ಮೌಲಿಕ ಕೃತಿ ಹೊರತಂದು ಸಾರ್ಥಕ ಕಾರ್ಯ ಮಾಡಿದೆ. ಜ್ಯೋತಿ ಹೊಸೂರ ಅವರು ಅತ್ಯಂತ ಶ್ರದ್ಧೆ ಹಾಗೂ ಅನನ್ಯ ನಿಷ್ಠೆಯಿಂದ ಜೀವನ ಚರಿತ್ರೆ ರಚನಾ ಕಾರ್ಯ ಪೂರೈಸಿದ್ದಾರೆ. ಜೀವನ ಚರಿತ್ರೆ ಬರೆಯಲು ನನಗೆ ಸಹಜವಾಗಿ ಬಹಳ ಸಾರ್ಥಕತೆಯ ಭಾವ ಉಂಟಾಗಿದೆ. ಎಂದು ಲೇಖಕರು ಪ್ರಸ್ತಾಪಿಸಿದ್ದಾರೆ. ಈ ಕೃತಿಯನ್ನು ಓದಿದಾಗ, ಸಹೃದಯರಿಗೆ ಸಾರ್ಥಕತೆಯ ಭಾವ ಉಂಟಾಗುತ್ತದೆಯೆಂದು ಹೇಳಿದರೆ, ಖಂಡಿತಾ ಅತಿಶಯೋಕ್ತಿಯಾಗಿದೆ. ಸತ್ಯಾವನ್ನೇ ಎತ್ತಿ ಹೇಳಿದಂತಾಗುತ್ತದೆ.

**ಸಾತ್ವಿಕ ಸಾಹಿತಿ ಡಾ. ಬೆಟಗೇರಿ ಕೃಷ್ಣಶರ್ಮ :**
ಪ್ರೊ. ಜ್ಯೋತಿ ಹೊಸೂರ ಅವರ ಚಿತ್ರಿಸಿದ ಮತ್ತೊಂದು ಜೀವನ ಚರಿತ್ರೆಯಿದು. ಬೆಟಗೇರಿ ಕೃಷ್ಣಶರ್ಮರು ಹೊಸಗನ್ನಡ ಸಾಹಿತ್ಯದ ಅಗ್ರಮಾನ್ಯ ಲೇಖಕರು ಬಹುಮುಖ ಪ್ರತಿಭೆಯ ಸಜ್ಜನ ಹಾಗೂ ಸಾತ್ವಿಕ ಸಾಹಿತಿಗಳಾಗಿದ್ದರು. ಆನಂದಕಂದ ಕಾವ್ಯನಾಮದಿಂದ ಅಂದು ಕನ್ನಡ ನಾಡಿನ ಸಾರಸ್ವತ ಪ್ರಪಂಚದ ಮನೆಮಾತಾಗಿದ್ದ ಡಾ ಬೆಟಗೇರಿ ಕೃಷ್ಣಶರ್ಮರ ಬದುಕು ಬರಹಗಳ ಸ್ಥೂಲ ಪರಿಚಯ ನೀಡುವ ಕೃತಿಯಾಗಿದೆ.

ಕವಿಭೂಷಣ ಡಾ ಬೆಟಗೇರಿ ಕೃಷ್ಣಶರ್ಮರು ಸಂಪೂರ್ಣ ಸ್ವದೇಶಿ ಅವರ ವೇಷ ಭೂಷಣ ಆಚಾರ ವಿಚಾರ, ಬದುಕು, ಭಾವನೆ, ಯಾವುದರಲ್ಲಿಯೂ ಅವರ ಮೇಲೆ ಹೊರಗಿನ ಪ್ರಭಾವ ಕಾಣುವುದಿಲ್ಲ, ಸಂಪೂರ್ಣ, ಋತು ಮಾರ್ಗದಲ್ಲಿ ನಡೆದ ಶುಚಿರ್ಭೂತವಾದ ಸಾತ್ವಿಕ ಜೀವನ ಅವರದು ಇಲ್ಲಿಯ ನೆಲೆಗಟ್ಟಿನ ಮೇಲೆ ನಿಂತು ಇಲ್ಲಿಯ ಅನಿಸಿಕೆಗಳನ್ನು ತುಂಬಿಕೊಂಡು ಇಲ್ಲಿಯ ಭಾಷೆಯಲ್ಲಿಯೇ ನಾವಿನ್ನ ಪೂರ್ಣವಾದ ಅಭಿವ್ಯಕ್ತಿಯನ್ನು ಸಾಧಿಸಿಕೊಡಬಹುದು ಎಂಬುದನ್ನು ಅವರು ತಮ್ಮ ಬರಹಗಳಿಂದ ಸಿದ್ದ ಮಾಡಿ ಕೊಟ್ಟಿದ್ದಾರೆ. ಕೃಷ್ಣಶರ್ಮರರಲ್ಲಿ ಅರೆಕೊರೆ ಎನ್ನುವುದೊಂದು ಇಲ್ಲ. ತುಂಬಿದ ಕೊಡದಂತೆ ಅವರು ಸಂಪೂರ್ಣತೆಯ ಮನುಷ್ಯರು ಅವರಂತಹ ತುಂಬಿದ ಜನರಿಂದಲೇ ನಾಡಿಗೆ ಬೆಲೆ ಇದೆ. ಈ ಮೂರು ಮಾತುಗಳಲ್ಲಿ ನಾಡೋಜ ಪಾಟೀಲ ಪುಟ್ಟಪ್ಪ ನವರು ಬೆಟಗೇರಿಯವರ ಭವ್ಯ ವ್ಯಕ್ತಿತ್ವವನ್ನು ಅರ್ಥಪೂರ್ಣವಾಗಿ ಅನಾವರಣಗೊಳಿಸಿದ್ದಾರೆ.

ಆನಂದಕಂದರು ಕಾವ್ಯಕಥೆ, ಕಾದಂಬರಿ, ರೂಪಕ, ಚರಿತ್ರೆ, ಜಾನಪದ, ಮಕ್ಕಳ ಸಾಹಿತ್ಯ, ವಿಮರ್ಶೆ, ಸಂಶೋಧನೆ, ಸಾಂಪದಾನೆ, ಪತ್ರಿಕಾಸಾಹಿತ್ಯ, ಆತ್ಮಚರಿತ್ರೆ, ಹೀಗೆ ಸಾಹಿತ್ಯದ ಬಹುಪಾಲು ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸಿದವರು. ಸ್ವಾತಂತ್ರ್ಯದ ಆಂದೋಲನ ಕರ್ನಾಟಕತ್ವದ ಜಾಗೃತಿ ಕರ್ನಾಟಕ ಏಕೀಕರಣ, ಚಟುವಳಿ ಹೀಗೆ ಅರವತ್ತು ವರುಷಗಳಿಗೂ ಮಿಕ್ಕಿ ಬೆಟಗೇರಿಯವರು ಶ್ರಮಪಟ್ಟು ದುಡಿದಿದ್ದಾರೆ. ಅಂತಹ ಧೀಮಂತ ಸಾಹಿತಿಯನ್ನು, ಜಾನಪದ ದಿಗ್ಗಜರನ್ನು ಮತ್ತೋರ್ವ ಜಾನಪದ ದಿಗ್ಗಜರು ಪರಿಚಯಿಸಿದ್ದು ಅರ್ಥಪೂರ್ಣ. ಡಾ. ಬೆಟಗೇರಿ ಕೃಷ್ಣ ಶರ್ಮರ ಬದುಕು ಡಾ. ಕೃಷ್ಣಶರ್ಮರ ಸಾಧನೆಗಳ ಪಕ್ಷಿನೋಟ, ಕೃತಿಗಳ ಸ್ಥೂಲ ಪರಿಚಯ ಕಾವ್ಯ, ಸಣ್ಣಕಥೆ, ಕಾದಂಬರಿ ಬಾನುಲಿ ರೂಪಕಗಳು, ಜಾನಪದ ಸಂಪದಾನೆ, ಪಠ್ಯ ಸಂಪದಾನೆ ಮತ್ತು ಇತರ ಪ್ರಬಂಧ ಕೃತಿಗಳ ವಿವರಯುಕ್ತ ಪರಿಚಯ, ಆನಂದಕಂದರ ಹಿರಿಮೆ ಮತ್ತು ವೈಶಿಷ್ಟ್ಯಯ ವ್ಯಕ್ತಿತ್ವದ ವಿಶೇಷತೆಗಳ ಪುನರ್ಮನನ ಬೆಟಗೇರಿ ಗ್ರಾಮದ ಜನತೆಗೆ ಧನ್ಯವಾದಗಳು ಹೇಗೆ ಹಲವಾರು ಉಪಶಿರ್ಷಿಕೆಗಳ ಪರಿಧಿಯಲ್ಲಿ ಬೆಟಗೇರಿ ಕೃಷ್ಣಶರ್ಮ ಜೀವನ ಸಾಧನೆ, ವಿಶೇಷತೆಗಳನ್ನು ಜ್ಯೋತಿ ಹೊಸೂರರು ಅರ್ಥಪೂರ್ಣವಾಗಿ ಬಿಡಿಸಿದ್ದಾರೆ.

“ಬೆಟಗೇರಿ ಕೃಷ್ಣ ಶರ್ಮರು ತಮ್ಮ ದೇವರ ಮನೆಯಲ್ಲಿ ಕಟ್ಟಾ ವೈದಿಕ ಬ್ರಾಹ್ಮಣರು ಪಡಸಲಾಗೆ ಬಂದರೆ ಸಮನ್ವಯವಾದಿ ಸಜ್ಜನರು ಮನೆಯಿಂದ ಹೊರಬಂದರೆ ಸಂಪೂರ್ಣ ವಿಶಾಲದೃಷ್ಟಿಯ ಗಣ್ಯರು, ಸಕಲರೊಂದಿಗೆ ಒಂದಾಗಿ ಹೊಂದಿಕೊಂಡು ಮುನ್ನಡೆಯುವ ಹೊಂದಾಣಿಕೆ ಗುಣದ ಮಾನ್ಯರು”[೨೨]

“ಅವರು ಒಂದು ಬಗೆಯಲ್ಲಿ ನಡೆದಾಡುವ ಜಾನಪದ ವಿಶ್ವಕೋಶವಾಗಿ ರೂಪುಗೊಂಡರು. ಅದರಲ್ಲಿ ಹುದುಗಿದ್ದ ಅಪಾರ ಜಾನಪದ ಸಂಪತ್ತಿನಲ್ಲಿಯ ಒಂದು ಪೈಸೆಯಷ್ಟು ಭಾಗ ಮಾತ್ರ ಬೆಳಕು ಕಂಡು, ಇನ್ನುಳಿದುದೆಲ್ಲ ಅವರೊಂದಿಗೆ ಹೋಗಿಯೇ ಬಿಟ್ಟಿತು. ಜಾನಪದ ಕ್ಷೇತ್ರಕ್ಕೆ ಇದೊಂದು ದೊಡ್ಡ ನಷ್ಟ”[೨೩] “ಆನಂದಕಂದರ ವ್ಯಕ್ತಿತ್ವ ವಿಶಿಷ್ಟ ಅಂಶಗಳೆಲ್ಲವು ಅವರ ಕವನ ಕತೆ, ಕಾದಂಬರಿ, ಜಾನಪದ ಮತ್ತು ಪತ್ರಿಕಾ ಕಾರ್ಯ, ಗ್ರಂಥ ಸಂಪಾದನೆ ಇತ್ಯಾದಿಗಳಲ್ಲಿ ಪ್ರಧಾನವಾಗಿ ಅಭಿವ್ಯಕ್ತಗೊಂಡಿದೆ. ಅವರ ಎಲ್ಲ ಬಗೆಯ ಸಾಹಿತ್ಯ ಕೃತಿಗಳಲ್ಲಿ ಅವರ ಹುಟ್ಟು ಬೆಳವಣಿಗೆಯೊಂದಿಗೆ ಮೈಮನಗಳೊಂದಿಗೆ ಒಂದಾಗಿದ್ದ ಜಾನಪದ ಅಂಶಗಳು ಒಂದಿಲ್ಲೊಂದು ಬಗೆಯಲ್ಲಿ ತಲೆಯೆತ್ತಿದ್ದನ್ನು ಅವರ ಕೃತಿಗಳ ಸೂಕ್ಷ್ಮ ಅಧ್ಯಯನದಿಂದ ಸ್ಪಷ್ಟವಾಗಿ ಗುರುತಿಸಲು ಸಾಧ್ಯ”.[೨೪] ಎಂಬುದು ಲೇಖಕರ ಆಶಯವಾಗಿದೆ.

“ಡಾ ಬೆಟಗೇರಿ ಕೃಷ್ಣಶರ್ಮರು ಅಚ್ಚಗನ್ನಡ ಸಾಹಿತಿಗು ಬೇರೆ ಭಾಷೆಗಳಿಂದ ಪ್ರಭಾವಿತರಾದ ಕನ್ನಡ ಶೈಲಿ ಅವರದಲ್ಲ. ಕನ್ನಡ ಭಾಷೆಯ ಮೇಲೆ ಅಸಾಧಾರಣವಾದ ಪ್ರಭುತ್ವವನ್ನು ಅವರು ಹೊಂದಿದ್ದರು, ಅಕ್ಷರಶುದ್ಧಿ ವ್ಯಾಕರಣಶುದ್ಧಿ ಅಸಂಧಿಗತ್ವ ಹಾಗೂ ಅಚ್ಚಗನ್ನಡತ್ವಗಳು ಅವರ ಭಾಷಾ ಶೈಲಿಯ ವೈಶಿಷ್ಟ್ಯಗಳಾಗಿದ್ದವು.”[೨೫] ಗಮನಾರ್ಹವಾಗಿದೆ.

ಕನ್ನಡ ಅಂದಿನ ಕಾಲದ ಸಾಹಿತ್ಯ ಪತ್ರಿಕೆಗಳಲ್ಲಿ ಆನಂದ ಕಂದರ ಸೇವೆ ಸ್ಮರಣೀಯ ‘ಜಯಂತಿ, ಮಾಸಪತ್ರಿಕೆ ಅವರ ವ್ಯಕ್ತಿತ್ವದ ಒಂದು ಅಂಗವಾಗಿ ಬಿಟ್ಟಿತು. ಆ ಪತ್ರಿಕೆಯಿಂದಾಗಿ ಅನೇಕ ಹೊಸ ಹೊಸ ಸಾಹಿತ್ಯಗಳನ್ನು ಆನಂದಕಂದರು ನಿರ್ಮಿಸಿದರು. ಆನಂದಕಂದರ ಕೀರ್ತಿಯು ದ್ವೀಪಸ್ತಂಬದಂತೆ ಜಯಂತಿ ದಿಗ್ವಿಜಯ ಸಾಧಿಸುವದರಲ್ಲಿ ಸಂಶಯವಿಲ್ಲ. ಪತ್ರಿಕಾ ಕಾರ್ಯಾಲಯದಲ್ಲಿ ಆನಂದಕರ ತಂದೆಯಂಥ ಪಾಲಕ ಭಾವನೆ.”[೨೬]

ಈ ಮಾತುಗಳು ಆನಂದಕಂದರ ವ್ಯಕ್ತಿತ್ವವನ್ನು ಧ್ವನಿಪೂರ್ಣವಾಗಿ ನಿರೂಪಿಸುತ್ತವೆ. ಕಿರಿದಾದಲ್ಲಿ ಪಿರಿದಾರ್ಥ ತುಂಬುವುದೆಂದರೆ ಇದೆ. ಆನಂದಕಂದರ ಹಿರಿಮೆ ಮತ್ತು ವೈಶಿಷ್ಟ್ಯ ದಾಖಲಿಸಿದ್ದು ಹೀಗೆ “ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಉತ್ತರದ ಕೃತಿ ರಚಿಸಿದ ಬಹುಮುಖ ಪ್ರತಿಭೆಯ ಮೇಧಾವಿ ಸಾಹಿತಿಗಳು ಕನ್ನಡದಲ್ಲಿ ಕೇವಲ ಬೆರಳೆಣಿಕೆಯ ಮೇಲೆ ಎಣಿಸುವಷ್ಟು ಮಾತ್ರ ಇದ್ದಾರೆ. ಅಂಥವರಲ್ಲಿ ಡಾ ಬೆಟಗೇರಿ ಕೃಷ್ಣಶರ್ಮರವರಿಗೆ ಮಹತ್ವದ ಸ್ಥಾನ ಮೀಸಲೆಂಬುದನ್ನು ಇಲ್ಲಿಯವರೆಗಿನ ಅವರ ಕೃತಿಗಳ ಪರಿಚಯದಿಂದ ಯಾರಾದರೂ ನಿರ್ಬಂಧಿಸಬಹುದಾಗಿದೆ. ಪ್ರತಿಯೊಂದು ಸಾಹಿತ್ಯ ಪ್ರಕಾರದಲ್ಲೂ ಅವರ

ಕೃತಿಗಳು ಉನ್ನತಮಟ್ಟ ಕಾಯ್ದುಕೊಂಡಿದೆ. 'ಒಡನಾಡಿ' ಮತ್ತು 'ನಲ್ವಾಡುಗಳು' ಈ ಭಾವಗೀತೆ ಸಂಕಲನಗಳು, 'ಸುದರ್ಶನ' ಮತ್ತು 'ರಾಜಯೋಗಿ' 'ಕಾದಂಬರಿಗಳು' 'ಮಾತನಾಡುವ ಕಲ್ಲು' ಮತ್ತು 'ಜನಪದ ಜೀವನ' ಕಥಾ ಸಂಗ್ರಹಗಳು' ಕರ್ನಾಟಕ 'ಜನಜೀವನಗಾಥೆ' ಸಂಶೋಧನೆ ಕೃತಿ ನಮ್ಮ ಸಾಂಸ್ಕೃತಿಕ ಪರಂಪರೆಯಂಥ ಸಾಂಸ್ಕೃತಿಕ ಗ್ರಂಥಗಳು ಬೆಟಗೇರಿ ಕೃಷ್ಣಶರ್ಮರನ್ನು ಅಜರಾಮರಗೊಳಿಸುತ್ತದೆ. ಸದಾಕಾಲ ಕನ್ನಡ ಸಾಹಿತ್ಯದಲ್ಲಿ ಅವು ಮೇಲ್ಮಟ್ಟದಲ್ಲಿ ಉಳಿಯುತ್ತವೆ. ಜಾನಪದ ಮತ್ತು ಸಂಪಾದನಾ ಕ್ಷೇತ್ರಕ್ಕೆ ಸಂಬಂಧಿಸಿದ ಅವರ ಪಾಂಡಿತ್ಯ ವಿದ್ವತ್ತು ಅಸದೃಶ್ಯವಾದುದೂ ಬೆಟಗೇರಿಯವರದು ಗೊಮ್ಮಟ ವ್ಯಕ್ತಿತ್ವ"[೨೭] ಹೀಗೆ ಕೆಲವೇ ಮಾತುಗಳಲ್ಲಿ ಬೆಟಗೇರಿಯವರ ಸಾಹಿತ್ಯದ ದರ್ಶನ ಮಾಡಿಸಿದ್ದಾರೆ.

ಪತ್ರಿಕೋದ್ಯಮ ಸರಿಯಾಗಿ ಬೆಳೆದಿದ್ದು ಅಂದಿನ ಕಾಲದಲ್ಲಿ ಏಕಮುಖ ನಿಷ್ಠೆಯಿಂದ 'ಜಯಂತಿ' ಮುಂತಾದ ಪತ್ರಿಕೆಗಳ ಮೂಲಕ ಕನ್ನಡ ನಾಡು ನುಡಿಗೆ ಸಲ್ಲಿಸಿದ ಸೇವೆಯ ಬಗೆಗೆ ಎಷ್ಟು ಹೇಳಿದರು ಕಡಿಮೆ, ಎಷ್ಟು ಹೊಗಳಿದರೂ ಕಡಿಮೆ, ಜಯಂತಿ ನವೋದಯ ಕಾಲದ ಇಪ್ಪತ್ಮೂರು ವರ್ಷಗಳ ಸಾಹಿತ್ಯದ ದಾಖಲೆಯಾಗಿವೆ ಬೆಟಗೇರಿಯೆವರ ಕರ್ತೃತ್ವಶಕ್ತಿಯ ವಿದ್ವತ್ತಿನ ಮತ್ತು ಪ್ರತಿಭೆಯ ಪತ್ರಿಕೆಯಾಗಿದೆ."[೨೮] ಈ ಮಾತುಗಳು ಅವರ ಪತ್ರಿಕಾ ಸಾಹಿತ್ಯದ ವಿಶೇಷತೆಗೆ ಸಾಕ್ಷಿಯಾಗಿದೆ. ಡಾ. ಬೆಟಗೇರಿ ಕೃಷ್ಣಶರ್ಮರ ಸಾಧನೆಗಳ ಪಕ್ಷಿನೋಟ ಕೃತಿಗಳ ಸ್ಥೂಲ ಪರಿಚಯ ಪ್ರಬಂಧದ ಕೃತಿಗಳ ವಿವರಯುಕ್ತ ಪರಿಚಯ ಈ ಬರವಣಿಗೆಯು ಪ್ರಸ್ತುತ ಕೃತಿಯ ಹೃದಯ ಭಾಗವೆಂದು ಹೇಳಬಹುದು. ಜ್ಯೋತಿ ಹೊಸೂರ ಅವರ ವ್ಯಾಪಕವಾದ ಓದು, ಖಚಿತ ನಿಲವು ಸ್ಪಷ್ಟಪಡಿಸಿದ್ದಾರೆ.

ಈ ಕೃತಿಯ ಕೊನೆಯ ಅಧ್ಯಾಯ ಬೆಟಗೇರಿ ಗ್ರಾಮದ ಜನತೆಗೆ ಧನ್ಯವಾದಗಳು ವಿಶೇಷವಾಗಿದೆ. ಕೃಷ್ಣ ಶರ್ಮರ ಕಾಲಾನಂತರ ಅವರ ಕುರಿತಾಗಿ ಹಮ್ಮಿಕೊಂಡ ಕಾರ್ಯಕ್ರಮದ ವಿವರ ಇದೆ. ಬೆಟಗೇರಿಯವರ ಶತಮಾನೋತ್ಸವ ಪ್ರಾರಂಭೋತ್ಸವವನ್ನು ಬೆಟಗೇರಿಯಲ್ಲಿಯೇ ಸಾರ್ವಜನಿಕವಾಗಿ ಅದ್ದೂರಿಯಾಗಿ ಏರ್ಪಡಿಸಿದುದು. ಊರಿನ ಒಂದು ದೊಡ್ಡ ಜಾತ್ರೆ ಎಂಬಂತೆ ಊರವರಲ್ಲಿ ಕರಿಕಟ್ಟಿ ನಿಂತು ವಿವಿಧ ರೀತಿಯಿಂದ ಪಾಲ್ಗೊಂಡಿರುವುದು ಒಂದು ವಿಶೇಷವಾಗಿದೆ. ಆನಂದಕಂದರ ಹೆಸರಿನಲ್ಲಿ ಬಯಲು ರಂಗಮಂದಿರ ಸ್ಥಾಪನೆ ಊರಿನ ಪ್ರಮುಖ ವೃತ್ತದಲ್ಲಿ ಬೆಟಗೇರಿ ಕೃಷ್ಣಶರ್ಮರ ಶಿಲಾ ಪ್ರತಿಮೆ ಸ್ಥಾಪಿಸಿ ಅನಾವರಣ ಸಮಾರಂಭ ಸಮಗ್ರ ಸಾಹಿತ್ಯದ ವಿಚಾರ ಸಂಕಿರ್ಣದ ಏರ್ಪಾಟು ಮಹತ್ತರ ಅಂಶಗಳಾಗಿವೆ.

"ಸರಕಾರದ ನೆರವಿಲ್ಲದೆ ಜನಸಾಮಾನ್ಯರು ಮತ್ತು ಸುತ್ತಲಿನ ಆಸಕ್ತರು ಸ್ವಯಂ ಸ್ಫೂರ್ತಿಯಿಂದ ಹಣಕೂಡಿಸಿ ಎಲ್ಲರೂ ಒಂದಾಗಿ ಚೆಂದಾಗಿ ಮುಂದೆ ನಿಂತು ಕನ್ನಡ ಸಾಹಿತಿಯೊಬ್ಬರ ಶಿಲಾ ಪ್ರತಿಮೆ ಹುಟ್ಟೂರಲ್ಲಿ ಸಂಸ್ಥಾಪಿಸಿದ ಮೊಟ್ಟಮೊದಲನೆಯ

ಉದಾಹರಣೆ ಇದಾಗಿದೆ".[೨೯] ಆದ್ದರಿಂದಲೇ ಲೇಖಕರು ಬೆಟಗೇರಿ ಗ್ರಾಮದ ಜನತೆಗೆ ಧನ್ಯವಾದ ಹೇಳಿದ್ದು ಔಚಿತ್ಯಯುತವಾಗಿದೆ.

ಅನುಬಂಧ-ಒಂದರಲ್ಲಿ ಕೃತಿಗಳ ಯಾದಿ ಅನುಬಂಧ ಎರಡರಲ್ಲಿ ಆನಂದ ಕಂದರ ಜೀವನ ಘಟನಾವಳಿ ನೀಡಿದ್ದು ಓದುಗರಿಗೆ ಅತ್ಯಮೂಲ್ಯ ಮಾಹಿತಿ ಪೂರೈಸಲು ಸಹಾಯವಾಗಿದೆ. ಕೃತಿ ಉದ್ದಕ್ಕೂ ಹೊಸೂರ ಪರಿಶ್ರಮ ಎದ್ದುಕಾಣುತ್ತದೆ. ಲೇಖಕರ ಶ್ರಮ ಸಂಸ್ಕೃತಿ ಕೃಷ್ಣಶರ್ಮರ ವೈಶಿಷ್ಟ್ಯತೆಗೆ ತಲೆಬಾಗುತ್ತದೆ.

**ಬೀರಪ್ಪದೇವನ ಉಪಾಸಕರ ಮಾದರಿಗಳು ಮತ್ತು ಕ್ಷೇತ್ರಗಳು :**

ಬೀರಪ್ಪದೇವನ ಉಪಾಸಕರ ಮಾದರಿಗಳು ಮತ್ತು ಕ್ಷೇತ್ರಗಳು ಜ್ಯೋತಿ ಹೊಸೂರ ಅವರು ರಚಿಸಿದ ಮಹತ್ವದ ಕೃತಿಯಾಗಿದೆ. ಈ ಕೃತಿಯನ್ನು ಕಾಲಗತಿ ಪ್ರಕಾಶನದಿಂದ ೨೦೦೭ ರಲ್ಲಿ ಹೊರತರಲಾಗಿದೆ. ಇದು ಒಂದು ಚಿಕ್ಕ ಕೃತಿಯಾಗಿದ್ದು, ೫೪ ಪುಟಗಳ್ಳುಳ್ಳದ್ದು ಇದು ಮೂರು ಮಾಹಾಪುರುಷರ ಬಗ್ಗೆ ಬರೆದಿರುವ ಪರಿಚಯ ಕೃತಿಯಾಗಿದೆ.

"ಪ್ರಸ್ತುತ ಕೃತಿಯಲ್ಲಿ ಗೊಲ್ಗೇರಿಯ ಗೊಲ್ಲಾಳ, ಹಲಜಂತಿಯ ಮಾಳಪ್ಪ, ಪಟ್ಟಣಕೊಂಡಲಿಯ ಇಟ್ಟಪ್ಪ ಹೆಸರಿನ ಮೂವರು ಮಾಹಾಪುರುಷರು ಪರಿಚಯ ಮತ್ತು ಅವರ ಕ್ಷೇತ್ರಗಳ ಬಗ್ಗೆ ಮಾಹಿತಿಗಳನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ. ಈ ದೈವತೆಗಳ ಮೂಲ ಮತ್ತು ಪ್ರೇರಣಾಶಕ್ತಿ ಬೀರಪ್ಪದೇವನಾಗಿದ್ದಾನೆಂಬುದು ಬಹುಮುಖ್ಯ ಸಂಗತಿಯಾಗಿದೆ."[೩೦] ಈ ಲೇಖಕರ ಅರಿಕೆಯಲ್ಲಿ ಹೇಳಿದ ಮಾತು ಮೂರು ಮಹಾಪುರುಷರು ನಡೆದು ಬಂದ ದಾರಿಯನ್ನು ಈ ಮೂರು ಬಿಡಿ ಲೇಖನಗಳನ್ನು ಒಂದೂಗೂಡಿಸಿ ಈ ಕೃತಿಯನ್ನು ಹೊರತಂದದ್ದು ಜನರಿಗೆ ಈ ಮಹಾಪುರುಷರ ಚರಿತ್ರೆಯನ್ನು ವಿಶ್ಲೇಷಣೆ ಕೈಕೊಂಡಿದ್ದು ಹೊಸೂರರ ವ್ಯಕ್ತಿತ್ವಕ್ಕೆ ಮೆರಗು ಸುಸುತ್ತದೆ.

ಕೃತಿಯಲ್ಲಿ ಗೊಲ್ಗೆರಿಯ ಗೊಲ್ಲಾಳ, ಹುಲಜಂತಿಯ ಮಾಯಪ್ಪ, ಪಟ್ಟಣ ಕಡೋಲಿಯ ಇಟ್ಟಪ್ಪ, ಮತ್ತು ಈ ಕೃತಿಗೆ ಯಾವುದೇ ಮುನ್ನುಡಿ ಬೆನ್ನಾಡಿಯನ್ನು ಕಾಣಿಸುವುದಿಲ್ಲಾ ಒಂದು ವಿಶೇಷವಾದ ಸಂಗತಿಯಾಗಿದೆ. "ವಾಸ್ತವವಾಗಿ ಪಟ್ಟಣಕಡೋಲಿಯ ಇಟ್ಟಪ್ಪನು ಒಬ್ಬ ಐತಿಹಾಸಿಕ ವ್ಯಕ್ತಿಯಾಗಿದ್ದರೂ ಕೂಡ ಕಾರಣಾಂತರಗಳಿಂದ ಬೀರಪ್ಪ ದೇವನೊಂದಿಗೆ ತಾದಾತ್ಮ್ಯ ಹೊಂದಿ ಬಿಟ್ಟಿದ್ದಾನೆಂಬುದಾಗಿ ಗಮನಿಸಬೇಕಾಗುತ್ತದೆ. ಇಟ್ಟಪ್ಪನು ಉನ್ನತೀಕರಣಗೊಂಡು ಬೀರಪ್ಪನಾಗಿನೆಂಬುದು ಸ್ಪಷ್ಟ ಇಟ್ಟಪ್ಪದೇವರು ಬೀರಪ್ಪನ ಉಪಾಸಣೆಯಿಂದ ಪ್ರತ್ಯಕ್ಷದಲ್ಲಿ ಬೀರಪ್ಪನೇ ಆಗಿಬಿಟ್ಟಿದ್ದಾನೆ ಇದು ಉಪಾಸಣೆಯ ಅನನ್ಯ ಮಾದರಿ"[೩೧]

"ಬೀರಪ್ಪದೇವ ವೀರತನಕ ಪ್ರತೀಕ ಪ್ರಾಚೀನ ಕಾಲದಲ್ಲಿ ದೈಹಿಕ ವೀರತ್ವ ಅನಿವಾರ್ಯವಾಗಿತ್ತು. ಅಂತೆಯೇ ಅಂದಿನ ಬೀರದೇವ ದೈಹಿಕ ವೀರತನದ ಪ್ರೇರಕ ಶಕ್ತಿಯಾಗಿದ್ದು ಇಂದು ವಿದ್ಯಾವೀರತನ ಬೇಕಾಗಿದೆ. ಬೌದ್ಧಿಕ ವೀರತನ ಬೇಕಾಗಿದೆ.

ವೈಜ್ಞಾನಿಕ ವೀರತನ, ವೈಜ್ಞಾನಿಕ ವೀರತನ ಬೇಕಾಗಿದೆ. ವೈಜ್ಞಾನಿಕ ವೀರತನ, ವೈಚಾರಿಕ ವೀರತನ ಬೇಕಾಗಿದೆ, ಸಾಹಸ ಪ್ರವೃತ್ತಿಯ ವೀರತನ ಬೇಕಾಗಿದೆ. ಹೀಗಾಗಿ ಹೊಸತನದ ಕಾಲಧರ್ಮದ ವೀರತನಗಳಿಗೆ ಪ್ರೇರಣೆ ನೀಡುವಂತೆ ಬೀರಪ್ಪ ದೇವರ ಉಪಾಸನೆಯ ಮಾದರಿಗಳನ್ನು ಬದಲಿಸಿಕೊಳ್ಳಬೇಕಾದುದು. ಇಂದಿನವರೆಗೆ ಅನಿವಾರ್ಯವೆಂಬುದನ್ನು ಆಸಕ್ತರು ಅಂತುಕೊಳ್ಳಬೇಕಾಗಿದೆ. ಈ ಹಿನ್ನೆಲೆಯಲ್ಲಿ ಹೆಚ್ಚಿನ ಅಧ್ಯಯನ, ಚಿಂತನ, ಮಂಥನ, ಮಾಡಲು ಈ ಕೃತಿ ಚಾಲನೆ ನೀಡಬಹುದೆಂದು ಆಶಿಸಲಾಗಿದೆ."[೩೨]

ಶಿವಶರಣರು ಸಾಮಾಜಿಕ, ಧಾರ್ಮಿಕ, ಸಾಹಿತ್ಯದ ಆರ್ಥಿಕ, ವೈಚಾರಿಕ ಮುಂತಾದ ಕ್ಷೇತ್ರಗಳಲ್ಲಿ ತಮ್ಮ ತಮ್ಮ ಆಚಾರ ವಿಚಾರಗಳ ಮೂಲಕ ಅಂದು ಮಾಡಿಸಿ ಕ್ರಾಂತಿಕಾರಿ ಸಾಧನೆಗಳ ವ್ಯಾಪ್ತಿ ಇಂದಿನವರೆಗೆ ದಿಗಿಲು ಉಂಟಾಗುವಷ್ಟು ಪರಿಣಾಮಕಾರಿಯಾಗಿದೆ ಈ ವಾಸ್ತವವನ್ನು ಚಿಂತಕರರು ಪ್ರಜ್ಞಾವಂತರು ವಿಚಾರಶೀಲರು, ಗುರುತಿಸತೊಡಗಿರುವುದು. ಕರ್ನಾಟಕ ಹಿರಿಮೆಯ ದೃಷ್ಟಿಯಿಂದ ಅತ್ಯಂತ ಮಹತ್ವದ ಸಂಗತಿಯಾಗಿದೆ.

**ಸೇವಾಭಾವದ ಹೋರಾಟಗಾರ :**

ಸೇವಾಭಾವದ ಹೋರಾಟಗಾರ 'ಜಿ.ಎಸ್.ಹಿಟ್ಟಣಗಿ ಅಜ್ಜ' ಮತ್ತೊಂದು ಜೀವನ ಚರಿತ್ರೆ, ಸುಮಾರು ಮೂವತ್ತು ವರ್ಷಗಳಷ್ಟು ಹಿಂದಿನ ದೀರ್ಘಾವಧಿಯಿಂದ ಲೇಖಕರು ಹಿಟ್ಟಣಗಿಯವರನ್ನು ಅವರ ಚಟುವಟಿಕೆಗಳನ್ನು ಸಾಧನೆಗಳನ್ನು ವಿಶೇಷತೆಗಳನ್ನು ಸಮೀಪದಿಂದ ನೋಡಿದ್ದಾರೆ. ನಿವೃತ್ತಿಯ ನಂತರವೂ ಹಿಟ್ಟಗಿಯವರು ವಿವಿಧ ಬಗೆಯ ಸಾಮಾಜಿಕ ಕಾರ್ಯಗಳಲ್ಲಿ ತಲ್ಲೀನರಾಗಿ ತೊಡಗಿಕೊಂಡಿರುವದನ್ನು ಗಮನಿಸಿದ್ದಾರೆ. ಪ್ರಾಸಂಗಿಕವಾಗಿ ಮೆಚ್ಚುಗೆ ಅಭಿವ್ಯಕ್ತಗೊಳಿಸಿದ್ದೇನೆ. ಈಗ ಅಕ್ಷರ ರೂಪ ಕೊಡಲು ಪ್ರಯತ್ನಿಸಿದ್ದೇವೆ. ಜಿ.ಎಸ್. ಹಿಟ್ಟಣಗಿ ಅವರ ಜೀವನ ಪರಿಚಯದ ಈ ಪುಸ್ತಿಕೆಯಿಂದ ಕರ್ನಾಕಟದ ಯುವ ಪೀಳಿಗೆಗೆ ಒಂದು ಬಗೆಯ ಸತ್ ಪ್ರೇರಣೆ ಸಿಗಬಹುದೆಂದು ನಂಬಿದ್ದೇವೆ."[೩೩] ಎನ್ನುವಲ್ಲಿ ಕೃತಿ ಆಶಯ ಮಡುಗಟ್ಟಿದೆ.

"ಹಿತ ಮಿತ ಎತ್ತರದ ಆಕರ್ಷಕ ನಿಲುವು ಕೆಂಪುಬಣ್ಣದ ಸುದೃಢವಾದ ಹಾಗೂ ಪ್ರಮಾಣ ಬದ್ಧವಾದ ಅಂಗಾಂಗಳ ಶರೀರ ಸಂಪತ್ತು, ದೊಡ್ಡ ದೊಡ್ಡ ಕಿವಿಗಳು, ಎದ್ದು ಕಾಣುವ ಮೂಗು ಕೆಂದುಟಿಗಳ ಆಕರ್ಷಕ ಮುಖಮುದ್ರೆ. ಮನ ಸೆಳೆಯುವ ಗಂಭೀರ ನಡಿಗೆಯ ಅನನ್ಯ ರೀತಿ ಎಂಭತ್ತರ ಈ ಇಳಿವಯಸ್ಸಿನಲ್ಲಿಯೂ ನೇರ ನಿಲುವಿನ ಗಂಭೀರಯುಕ್ತ ವ್ಯಕ್ತಿತ್ವ"[೩೪] ವೆಂದು ಕಲಾವಿದ ಕುಂಚದಂತೆ ವ್ಯಕ್ತಿತ್ವವನ್ನು ಸೊಗಸಾಗಿ ಬಿಡಿಸಿದ್ದಾರೆ. ವರ್ಣಚಿತ್ರ ದಂತೆ ಶಬ್ಧಗಳಲ್ಲಿ ವ್ಯಕ್ತಿತ್ವನ್ನು ಹೊಸೂರ ಅವರು ಸೆರೆ ಹಿಡಿದಿದ್ದಾರೆ.

ಸಂಗೊಳ್ಳಿ ರಾಯಣ್ಣನನ್ನು ಚಿರಾಯುಗೊಳಿಸಿದ ಬೇಸರಿಲ್ಲದ ಹೋರಾಟಗಾರ 'ಹಿಟ್ಟಣಗಿ ಅಜ್ಜ' ಮಾನವನ ಅಸಾಧಾರಣ ಸಾಧನೆಗೊಂದು ಮಾದರಿ, ಬಾಲ್ಯ ಮತ್ತು

ವೃತ್ತಿ ಜೀವನ ಸೇವಾ ನಿವೃತ್ತಿಯ ನಂತರದ ಪ್ರವೃತ್ತಿ ಸೇವಾ ಕಾರ್ಯಗಳು ಬಳಗದ ಒಳ್ಳೆಯ ನೋಟ ಮತ್ತು ಚಟುವಟಿಕೆಗಳಲ್ಲಿ ತಲ್ಲೀನತೆ ಸಂತೃಪ್ತಿ ಜೀವನ ಹೀಗೆ ಒಟ್ಟು ಆರು ಅಧ್ಯಾಯಗಳಲ್ಲಿ ಜೀವನ ಚರಿತ್ರೆಯು ರೂಪಗೊಂಡಿದೆ. ಮೊದಲ ಭಾಗ ತುಂಬ ಕುತೂಹಲಕಾರಿಯಾಗಿದೆ. ಸಂಗೊಳ್ಳಿರಾಯಣ್ಣನ ವ್ಯಕ್ತಿತ್ವದ ಸೆಳೆತ ಒಂದೆಡೆಯಾದರೆ ಆತನ ಸ್ಮರಣೆಗಾಗಿ ಸೈನಿಕ ಪ್ರೌಢಶಾಲೆಯನ್ನು 'ನಂದಗಡ'ದಲ್ಲಿ ಸ್ಥಾಪಿಸಲು ಮಾಡಿದ ಹೋರಾಟ ರೋಮಾಂಚನಕಾರಿಯಾಗಿದೆ. ಜ್ಯೋತಿ ಹೊಸೂರ ಲೇಖನ ಚೇತೋಹಾರಿಯಾಗಿದೆ. ಹಿಟ್ಟಣಗಿಯವರ ಹೋರಾಟವನ್ನು ಚಿತ್ರಿಸುವಲ್ಲಿ ಸಫಲವಾಗಿದೆ. ಸಾಮಾನ್ಯ ಪೊಲೀಸ್ ಆಗಿ ಸರಕಾರಿ ಸೇವೆಗೆ ಸೇರಿ ವಲಯ ನಿರೀಕ್ಷಕ ಪೊಲೀಸ್ ಅಧಿಕಾರಿ (ಸಿ.ಪಿ.ಆಯ್) ಹುದ್ದೆಗೆ ಏರಿದ ಸಾಧನೆಯ ಪಕ್ಷಿ ನೋಟವನ್ನು ಹೊಸೂರರು ಕಟ್ಟಿಕೊಟ್ಟಿದ್ದಾರೆ. ಬಾಲ್ಯ ಜೀವನ ಮತ್ತು ವೃತ್ತಿ ಜೀವನ, ಎರಡನೆಯ ಅಧ್ಯಯದಲ್ಲಿ ಎಳೆಎಳೆಯಾಗಿಬಿಡಿಸಿದ್ದಾರೆ.

ಸೇವಾ ನಿವೃತ್ತಿಯ ನಂತರದ ಪ್ರವೃತ್ತಿ ಸೇವಾ ಕಾರ್ಯಗಳು ಕ್ರಿಯಾಶೀಲ ಹಿಟ್ಟಣಗಿಯವರ ಸಮಾಜ ಮುಖಿ ಚಟುವಟಿಕೆಗಳನ್ನು ಪರಿಚಯಿಸುತ್ತದೆ. ಬಳಗದ ಬಳ್ಳಿಯ ನೋಟವು ಚರಿತ್ರನಾಯಕ ಬಂಧು ಬಳಗ, ಕಳ್ಳುಬಳ್ಳಿಯ ಸಂಬಂಧಿಕರನ್ನು ಪರಿಚಯಿಸುವ ಭಾಗವಾಗಿದೆ. ಬಣ್ಣಬಣ್ಣದ ಭಾವಚಿತ್ರಗಳು ಪುಸ್ತಕದ ಆಕರ್ಷಣೆಯನ್ನು ಹೆಚ್ಚಳಗೊಳಿಸುವಲ್ಲಿ ನೇರವಾಗಿದೆ. ಸೇವಾ ಚಟುವಟಿಕೆಗಳಲ್ಲಿ ತಲ್ಲೀನತೆಯಲ್ಲಿ ಎಂಭತ್ತೊಂದು ವರ್ಷಗಳ ವಯೋವೃದ್ದರಾದ ಹಿಟ್ಟಣಗಿಯವರ ಕಾರ್ಯವೈಖರಿ ಆರೋಗ್ಯ ಸಂಪತ್ತು ಸಮಾಜ ಮುಖಿ ಚಟುವಟಿಕೆಗಳನ್ನು ವಿವರಿಸುತ್ತದೆ. ಇಳಿ ವಯಸ್ಸಿನಲ್ಲಿಯ ಹಿಟ್ಟಣಗಿ ಅವರ ನಿತ್ಯದ ಚಟುವಟಿಕೆಗಳು, ಸಾಗಿವೆ. ಒಂದಿಲ್ಲೊಂದು, ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಅದರಲ್ಲಿ ಸಂತೃಪ್ತಿ ಪಡೆಯುವುದನ್ನು ಲೇಖಕರು ಮನಮುಟ್ಟುವಂತೆ ಚಿತ್ರಿಸಿದ್ದಾರೆ, ಸರಳ, ನೇರ ಸಹಜವಾದ ಬರವಣಿಗೆಯ ಓದುಗರನ್ನು ಸೂಜಿಗಲ್ಲಿನಂತೆ ಸೆಳೆಯುತ್ತದೆ.

**೪.೩ : ಪತ್ರಿಕಾ ನೆಲೆ :**

**ಕಾಲ :**

ಉತ್ತರ ಕರ್ನಾಟಕ ಗಡಿಜಿಲ್ಲೆಯಾದ ಬೆಳಗಾವಿಯ ರಾಯಬಾಗ ತಾಲ್ಲೂಕಿನಲ್ಲಿ **'ಕಾಲ'** ಎಂಬ ಪತ್ರಿಕೆಯನ್ನು ಪ್ರಾರಂಭ ಮಾಡುವುದು ಮೂಲಕ ಪತ್ರಿಕಾ ರಂಗದಲ್ಲಿ ಮೈಲುಗಲ್ಲು ನಿರ್ಮಿಸಿದ್ದರು. ಆ ಕಾಲದಲ್ಲಿನ ಒಂದು ಸಾಹಸ. ೧೯೭೭ ರಲ್ಲಿ ಹೊಸೂರರ ದೂರದೃಷ್ಠಿ ಇಟ್ಟುಕೊಂಡು ಪತ್ರಿಕೆಯನ್ನು ಪ್ರಾರಂಭಿಸಿದರು. ಪತ್ರಿಕೆಯನ್ನು ಮೂರು ಭಾಗಗಳನ್ನಾಗಿ ವಿಂಗಡಿಸಿ ಕಾಲ–೧: ಬೇಸಿಗೆ, ಕಾಲ–೨: ಮಳೆ, ಕಾಲ–೩: ಚಳಿ ಹೀಗೆ ಸಂಚಿಕೆಗಳನ್ನು ಸಹೃದಯದ ಕೈಗೆ ನೀಡುವ ಕೆಲಸ ಹೊತ್ತು 'ಕಾಲ' ಸಾಹಿತ್ಯದ ಪತ್ರಿಕೆಯನ್ನು ತಮ್ಮ ಸಂಪಾದಕತ್ವದಲ್ಲಿ ಪ್ರಾರಂಭಿಸಿದರು.

ಜಾನಪದ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳ ಜೊತೆಗೆ ಶಿಷ್ಟ ಮತ್ತು ವೈಚಾರಿಕ ಲೇಖನಗಳನ್ನು ಪ್ರಕಟಿಸಿದ್ದರು. ಕಾಲಕ್ರಮೇಣ 'ಕಾಲ' ಪತ್ರಿಕೆ ಕಾಲಗತಿಯಾಗಿ ಮಾರ್ಪಾಟುಗೊಂಡಿತು. ಎರಡು ವರ್ಷದಲ್ಲಿ ಏಳು ಸಂಚಿಕೆಗಳು ಹೊರಬಂದವು. ಮುಂದೆ ಪತ್ರಿಕೆ ನಿಂತು ಹೋಯಿತು. ಸಂಶೋಧನಾ ಲೇಖನ ಡಾ ಬೆಟಗೇರಿ ಕೃಷ್ಣ ಶರ್ಮರ 'ಗೊಂದಲಿಗನ ಬೆಂದಬಾಳು' ಎನ್ನುವ ಜನಪದ ಶೈಲಿಯು ಕವಿತೆ ಮುಂತಾದುವೆಲ್ಲಾ ಪ್ರಕಟಗೊಂಡುದನ್ನು ನೋಡಿದರೆ 'ಕಾಲ' ಎನ್ನುವ ಪತ್ರಿಕೆ ಒಂದು ಜನಪದ ಪತ್ರಿಕೆ ಮಾಡುವ ಕಾರ್ಯವನ್ನು ಮಾಡಿದೆ ಎನ್ನಲಾಗಿದೆ.

ಕಾಲ–೨ ಮಳೆಗಾಲ ಸಂಚಿಕೆಯಲ್ಲಿ ಡಾ ಎಂ.ಬಿ. ಬೋಯ್ಗಿ ಅವರ 'ಗೊಂದಲಿಗ ಪದದ ರೂಪ ನಿಷ್ಪತ್ತಿ ಮತ್ತು ಗೊಂದಲಿಗರ ಮೂಲ' ಸಂಶೋಧನ ಲೇಖನ ಪ್ರಕಟಗೊಂಡಿದೆ. ಹಾಗೆಯೇ ವೀರಣ್ಣ ದಂಡೆಯವರ ಒಕ್ಕಲಿಗರ ಎರಡು ಸಂಕೇತಶಕ್ತಿಗಳು ಎನ್ನುವ ಸಂಶೋಧನ ಲೇಖನ ಇದೆ.

ಎಚ್.ಎಸ್. ಭೀಮನಗೌಡರ ಬರೆದ 'ಗ್ರಂಥ ವಿಮರ್ಶೆ' ಮತ್ತು ಭಾಸ್ಕರ ಪತ್ತಾರರ 'ಸೊನ್ನೆಯಿಂದ ಸೊನ್ನೆಗೆ' ಡಾ. ಸಂಗಮೇಶ ಸವದತ್ತಿಮಠರ 'ದ್ರಾವಿಡ ಭಾಷಾ ವ್ಯಾಸಂಗ' ಅದೇ ರೀತಿಯಾಗಿ ಭೋಜರಾಜ ಪಾಟೀಲರ 'ಪರದೇಶದಿಂದ ಬಂದ ಜಾಣ' (ರಂಗ ಲಾವಣಿ) ಏನ್‌ಸೋಗ ಮಾಡತಾಳನಾರಿ ಮತ್ತು ಯಾವ ಕಾಡಿಗೆ ಹೋದಳೂ ಎನ್ನ ಮೋಹದ ಗುಣವಂತೆ ಎನ್ನುವ ಲಾವಣಿಗಳು ಇದೇ ಪತ್ರಿಕೆಯಲ್ಲಿ ಪ್ರಕಟಗೊಂಡಿವೆ.

'ಒಕ್ಕಲಿಗನ ಎರಡು ಸಂಕೇತ 'ಶಕ್ತಿಗಳು' – ವೀರಣ್ಣ ಎಸ್. ದಂಡೆಯವರು ಬರೆದ ಲೇಖನದಲ್ಲಿ ಸಂಶೋಧನಾತ್ಮಕ ಶಕ್ತಿ ಅಡಿಗಿದನ್ನು ಕಾಣಬಹುದಾಗಿದೆ. ಹಳ್ಳಿಯ ಜಾನಪದ ಕಲೆಗಳಲ್ಲಿ ವ್ಯವಸಾಯವು ಒಂದು ಒಕ್ಕಲಿಗನಾದವನು ತನ್ನ ಒಕ್ಕಲುತನದಲ್ಲಿ ತನ್ನ ಅಪರೂಪದ ಎರಡು ಸಂಕೇತಗಳನ್ನು ಕಾಣುತ್ತಾನೆ. ಒಂದು –ಬೂದುಗ ಎಂದರೇನು? ಇದನ್ನು ಎಲ್ಲಿ ಇಡುತ್ತೇವೆ. ಇದರ ಮಹತ್ವದ ಬಗ್ಗೆ ತಿಳಿಸಿದ್ದಾರೆ. ಎರಡನೆಯದಾಗಿ ಕರಿಬಂಟ ಎಂದು ರಾಶಿಮಾಡುವಾಗ ಕಂಕಿ ಮತ್ತು ರವದಿಯನ್ನು ಸುಟ್ಟು ಬೂದಿಮಾಡಿ ಅದನ್ನು ಕಣದ ರಾಶಿಯ ಸುತ್ತಲು ಮಂಡಲ ಹಾಕುವುದಕ್ಕೆ ಕರಿಬಂಟ ಎನ್ನುವರು.

"ಶರಣ ಮಡಿವಾಳದ ಕರಿಬಂಟ ಕಣದಾಗ
ಹರಳಾದ ಕಣಕ ಬಳಬಂಟ ! ಪ್ರಭುಲಿಂಗ
ಗುರುಬುದ್ಧಿವಂತ ಲಿಂಗಾದ."[೩೫]

ಡಾ. ಬಿ.ಎಸ್. ಗದ್ದಗಿಮಠ ಇವರು ಈ ರೀತಿ ಹೇಳುತ್ತಾರೆ. ಕಾಲ–೩ ರಲ್ಲಿ ಚಳಿಗಾಲ ಸಂಚಿಕೆ (೧೯೭೭) ರಲ್ಲಿ ವೀರಣ್ಣಾ ದಂಡೆಯುವರು ಕನ್ನಡ ಲಾವಣಿ

ಮತ್ತು 'ಇಂಗ್ಲೀಷ ಬ್ಯಾಲೆಡ್' ಎನ್ನುವ ದೀರ್ಘ ಲೇಖನವಿದೆ. ಬೇರೆ ಬೇರೆ ಆಕರಗಳ ಸಹಾಯದಿಂದ ಬರೆದ ಲೇಖನವಿದು. ಲಾವಣಿ ಕಥನ ಕವನ ಬ್ಯಾಲೆಡ್ ಇತ್ಯಾದಿ ವಿಷಯಗಳ ಕುರಿತು ದೀರ್ಘವಾದ ಚರ್ಚೆಯ ಈ ಲೇಖನ ಪ್ರಕಟಿಸುವುದರ ಮೂಲಕ ಜಾನಪದ ಸಾಹಿತ್ಯದ ಪ್ರಕಾರಗಳಲ್ಲಿ ಒಂದಾದ ಲಾವಣಿ ಬಗೆಗಿರುವ ಗೊಂದಲವನ್ನು ಪರಿಹಾರ ಮಾಡುವ ಪ್ರಯತ್ನ ಮಾಡಿದು ಈ ಕಾಲ ಪತ್ರಿಕೆಯುದಾಗಿದೆ.

'ಕಾಲ ಕುರಿತು ಅಭಿಪ್ರಾಯ': "ಕಾಲಧರ್ಮ ಯೋಗ್ಯ ಹೆಸರು ಆಕರ್ಷನೀಯ ರಕ್ಷಾ ಕವಚ ಹೊತ್ತು ಭಾಗದ ಸಾಹಿತಿಗಳ ಮುಖವಾಣಿಯಾಗಿ ಚರ್ತುಮಾಸಕ್ಕೊಂದು ಅಡಿಯಿಡುವ ಸಂಕಲ್ಪದಿಂದ ಮೊದಲ ಅಡಿಯಿಟ್ಟ 'ಕಾಲ' ನಿಗೆ ಆಧರದ ಸ್ವಾಗತ ೧೭ ಕವನಗಳು ೪ ಸಂಶೋಶಧನಾ ಲೇಖನಗಳು ಒಂದು ನಾಟಕವನ್ನು ಒಡಲಲ್ಲಿಟ್ಟು ಕೊಂಡಿರುವ ಪ್ರಥಮ 'ಕಾಲ'ವನ್ನು ಇಲ್ಲಿ ಬಿಲ್ಲಿನಿಂದಲ್ಲ ಬೆರಳಿನಿಂದ ಹಿಂಜಬಯಸುವೆ."[೩೬] ಎನ್ನುವ ಭೋಜರಾಜ ಪಾಟೀಲರ ಅಭಿಪ್ರಾಯ ಸ್ಪಷ್ಟವಾಗಿದೆ.

"ಕಾಲ ರಚನಾತ್ಮಕ ಮತ್ತು ವಿಮರ್ಶಾತ್ಮಕ ಲೇಖನಗಳನ್ನು ಹೊತ್ತು ತರುವ ಆಸೆ ಪ್ರಕಟಿಸಿರುವುದು ಸಧ್ಯದ ಪರಿಸ್ಥಿತಿಯಲ್ಲಿ ಇಪತ್ರಿಕೆಯನ್ನುಂತಹ ಪತ್ರಿಕೆ ಬರುವುದು ಸ್ವಾಗತಾರ್ಹವೇ ಆದರೆ 'ಕಾಲ'ದ ಗರ್ಭದಲ್ಲಿ ೩ ಮತ್ತು ೪ ಪರವಾಗಿಲ್ಲ ಎನ್ನಬಹುದಾದ (ಸಂಶೋಧನೆಯಾದ್ದರಿಂದ) ಆಧರಿತ ಲೇಖನಗಳನ್ನು ಬಿಟ್ಟರೆ ಸ್ವಂತ ಕವನ ಲೇಖನಗಳು ಯಾವವು ಚೆನ್ನಾಗಿದೆ ಎಂದು ಬೆರಳು ತೋರಿಸುವಂತಿಲ್ಲ".[೩೭] ಎನ್ನುವ ಸಿ.ಎಂ. ಮಹಾದೇವರಾವ್‌ರ ಅಭಿಪ್ರಾಯ ಇದನ್ನು ಸ್ಪಷ್ಟಪಡಿಸುತ್ತದೆ. ಉತ್ತರಕರ್ನಾಟಕದ ಗಡಿಭಾಗದ ಸಾಹಿತಿಗಳಿಗೆ ಪತ್ರಿಕಾ ಮಾಧ್ಯಮವೆನ್ನದನಿಸುವ ಸ್ಥಳೀಯ ಅವಶ್ಯಕತೆ ಸಾಹಿತ್ಯಕ ತಿರುವುಗಳನ್ನೆಲ್ಲ ಸಮಾನದೃಷ್ಟಿಯಿಂದ ಕಾಣುವ ಒಂದು ಕನ್ನಡ ಪತ್ರಿಕೆಯ 'ಕಾಲ' ಅವಶ್ಯಕತೆ ಎರಡನ್ನು ಗುರುತಿಸಿ ಗುರಿಯಾಗಿಟ್ಟುಕೊಂಡು 'ಕಾಲ' ಹಾಕುತ್ತಿರುವ ಸಂಪಾದಕರ ಜೀವನ, ಶ್ರಮ, ಸಾರ್ಥಕವಾಗಿದೆ ಎಂದು ಹೇಳಬಹುದು.

**ಕಾಲಗತಿ :**

'ಕಾಲ'ದ ನಂತರದಲ್ಲಿ 'ಕಾಲಗತಿ'ಯಾಗಿ ೧೯೭೮ ರಿಂದ ಕನ್ನಡ ತ್ರೈಮಾಸಿಕ ಪತ್ರಿಕೆಯಾಗಿ ಮತ್ತು ರಚನಾತ್ಮಕ, ವಿಮರ್ಶಾತ್ಮಕ, ಸಂಶೋಧನಾತ್ಮಕ, ಸಾಹಿತ್ಯ ಸಂಕಲನವಾಗಿ ಹೊರಹೊಮ್ಮಿತು. ಇದರ ಸಂಪದಾಕರಾಗಿ ಜ್ಯೋತಿ ಹೊಸೂರರ ಕಾರ್ಯ ಗಮನಾರ್ಹವಾದದ್ದು. 'ಕಾಲಗತಿ'-೪ ರಲ್ಲಿ ಜುಲೈ, ಅಗಸ್ಟ, ಸಪ್ಟೆಂಬರ್, ಸಂಚಿಕೆ ೧೯೭೮ ಇದರಲ್ಲಿ ಸಂಪಾದಕ ಜ್ಯೋತಿ ಹೊಸೂರ ಅವರ 'ಗೊಂದಲ' ಲೇಖನ ಪ್ರಕಟವಾಯಿತು. 'ಕಾಲಗತಿ'-೫ ರಲ್ಲಿ ಅಕ್ಟೋಬರ್, ನವ್ಹೆಂಬರ್, ಡಿಸೆಂಬರ್, ೧೯೭೮ ರ ಪತ್ರಿಕೆಯಲ್ಲಿ ಶ್ರೀ ಎಸ್.ಎನ್. ಪೂಜಾರಿ ಅವರ 'ಹಾಲಮತದ ಹರಕೆಯ ಹಾಡು' ಜನಪದ ಲೇಖನ ಪ್ರಕಾಶಿತಗೊಂಡಿದೆ.

'ಕಾಲಗತಿ'-೬ ರಲ್ಲಿ ಜನವರಿ, ಫೆಬ್ರುವರಿ, ಮಾರ್ಚ ೧೯೭೯ ರ ಸಂಚಿಕೆಯಲ್ಲಿ ಡಾ. ಸಂಗಮೇಶ ಸವದತ್ತಿಮಠ ಅವರ ಜನಪದ ಹಾಡುಗಳ ಭಾಷೆ ಹಾಗೂ ಸಂಪಾದನೆ ಎಂಬ ಲೇಖನ ಪ್ರಕಟಗೊಂಡಿದೆ. ಪಿ.ಆರ್. ತಿಪ್ಪೇಸ್ವಾಮಿಯವರ ಸೂತ್ರದ ಗೊಂಬೆಯಾಟ ಜಾನಪದ ಲೇಖನ ಕೂಡ ಪ್ರಕಾಶಿತವಾಗಿದೆ. ಡಾ.ಶಂಬಾ. ಜೋಷಿಯವರ 'ಶಬ್ದಮಣಿದರ್ಪಣ'ದ ಬಗೆಗಿನ ಒಂದು ಜಿಜ್ಞಾಸೆ ಎಂಬ ಸಂಶೋಧನಾತ್ಮಕ ಲೇಖನವನ್ನು ನಾವು ಈ ಸಂಚಿಕೆಯಲ್ಲಿ ನೋಡುತ್ತೇವೆ.

ಅದೇ ರೀತಿ 'ಹೇಳುವೆ ಮಜಕೂರ್' ಜಾನಪದ ಹಾಡುಗಳ ಮೊಹರಂ ಹಾಡುಗಳನ್ನು ಡಾ.ನಿಂಗಣ್ಣ ಸಣ್ಣಕ್ಕಿಯವರು ಬರೆದರು ಇದನ್ನು ಆನಂದ ಝುಂಜರವಾಡ ಈ ಲೇಖನ ವಿಮರ್ಶೆ ಮಾಡಿದ್ದಾರೆ.

"ಕಾಂತಿ ಕೇಳ ಬಹುಚಿಂತೆ ಮಾಡಬ್ಯಾಡ
ಸಂತೋಷ ಇರಮನಕ
ಅಲ್ಲಿ ನಮ ಪಂತ ಗೆಲ್ಲುಕ ನಿರಕ
ಸ್ವಂತ ಕಾಳಗ ಮಾಡುದಕ
ಹೋಗತೀವ ಕರಬಲ್ಲಕs ......."[೩೮]

'ಕಾಲಗತಿ' – ೭ ರ ಸಂಚಿಕೆಯಲ್ಲಿ ಮೇ. ಜೂನ್ ೧೯೭೯ ರಲ್ಲಿ ವೀರಣ್ಣ ಎಸ್. ದಂಡೆಯವರ ಒಂದು ಜನಪದ ಕಥೆಯ ವಸ್ತು ಮತ್ತು ತಂತ್ರ ಒಕ್ಕಲಿಗ ಮತ್ತು ಹಕ್ಕಿ ಮತ್ತು ಜ್ಯೋತಿ ಹೊಸೂರರ 'ಒಡಪು' ಪದದ ರೂಪ ನಿಷ್ಪತ್ತಿ ಲೇಖನಗಳು ಪ್ರಕಟಗೊಂಡಿವೆ. ಇಲ್ಲಿ ಡಾ.ಎಂ.ಎಸ್.ಲಠ್ಠೆಯವರ ಪೊಡರ್ಪು-ಪೊಡಪು-ಹೊಡಪು>ಒಡಪು ಎಂದಾಗಿರಬೇಕೆನ್ನುವರ ತಾರ್ಕಿಕ ವಿಚಾರವನ್ನು ಜ್ಯೋತಿ ಹೊಸೂರ ಅವರು ಅಲ್ಲಗಳೆಯುತ್ತಾರೆ.

ನಾಮಪದ ಗಂಡನ ಮತ್ತು ಹೆಂಡತಿಯ ಹೆಸರಿಗೆ ವರ್ಣನಾತ್ಮಕ ಹಿನ್ನೆಲೆಯಾಗಿ ಆದರೊಂದಿಗೆ ಒಡಗೊಡಿಯೇ ಬರುವದರಿಂದ ಇದು ಒಡಪು ಎಂಬುದಾಗಿ ಜ್ಯೋತಿ ಹೊಸೂರ ಅದರ ನಿಷ್ಪತ್ತಿಯನ್ನು ಹೇಳುತ್ತಾರೆ ಈ ನಿಷ್ಪತ್ತಿಯನ್ನು ಸಮರ್ಥಿಸುವ ಎರಡು, ಹೊಸ ಆಧಾರಗಳನ್ನು ಕೊಡುತ್ತಾರೆ ಇವರ ಸೂಕ್ಷ್ಮ ಹಾಗೂ ಅತಿ ಸೂಕ್ಷ್ಮವಾದ ಜಾನಪದ ಗ್ರಹಿಕೆ ಹಾಗೂ ತರ್ಕವನ್ನು ಗುರುತಿಸಬಹುದು ತಾವೇ ಪ್ರಾರಂಭಿಸಿದ ಪತ್ರಿಕೆಯಲ್ಲಿ ತಮ್ಮ ಹಾಗೂ ಇತರ ಸಾಮಾನ್ಯರಿಗೆ ತಿಳಿಯುವ ಹಾಗೇ ಜನಪರ ಜಾನಪದ, ಶಿಷ್ಠ ವೈಚಾರಿಕದ ಬಗ್ಗೆ ಪ್ರಕಟಿಸಿ ಗಡಿನಾಡಿನಲ್ಲಿ ಉನ್ನತ ಸಾಹಿತ್ಯ ಕೃಷಿಗೈದು ಒಳ್ಳೆಯ ಕೆಲಸ ಮಾಡಿದ್ದನ್ನು ನಾವು ಇಲ್ಲಿ ಸ್ಮರಿಸದೆ ಇರಲ್ಲಾರೆವು.

## ೪.೪ : ಸಂಘಟನಾ ನೆಲೆ :

ಹೊಸೂರರು ರಾಯಬಾಗ ಮತ್ತು ಸ್ವಂತದ ಊರಾದ ಮುಗಳಖೋಡದ ಸರ್ವಾಂಗಿಣ ಮುನ್ನಡೆಗಾಗಿ ಪರಿಶ್ರಮಿಸಿದವರು, ವಿದ್ಯಾರ್ಥಿಯಾಗಿದ್ದಾಗಿನಿಂದಲೇ ರೈತರ ಸಂಘಟನೆಗಾಗಿ, ಉತ್ತಮ ಹೋರಿಗಳ ಮತ್ತು ದನಗಳ ಪ್ರದರ್ಶನ, ಆರೋಗ್ಯಯುಕ್ತ ಮಕ್ಕಳ ಪ್ರದರ್ಶನ, ಆರೋಗ್ಯ ಶಿಬಿರ ಇತ್ಯಾದಿಗಳನ್ನು ಸಂಘಟಿಸಿದ್ದರು. ಸ್ಥಳೀಯ ಸಹಕಾರಿ ಸಂಘ ಬಲಪಡಿಸಿ ರೈತರಿಗೆ ಅನೇಕ ಅನುಕೂಲತೆಗಳು ದೊರೆಯುವಂತಾಗಲು ಹೆಣಗಿದವರು. ಪ್ರಾಥಮಿಕ ಶಾಲೆಯ ಕಟ್ಟಡ ನಿರ್ಮಾಣಕ್ಕಾಗಿ ಸತತ ಐದು ದಿನ ಗಳವರೆಗೆ ಉಪವಾಸ ಸತ್ಯಾಗ್ರಹ ಮಾಡಿದವರು ಅನಂತರದಲ್ಲಿ ಹನ್ನೊಂದು ಕೋಣೆಗಳ ಕಟ್ಟಡವನ್ನು ಸರಕಾರಿ ಪ್ರಾಥಮಿಕ ಶಾಲೆಗಾಗಿ ಮುಖಂಡತ್ವವಹಿಸಿ ಕಟ್ಟಿಸಲಾರಂಭಿಸಿ ೧೯೬೮ ರಲ್ಲಿ ಪೂರ್ಣಗೊಳಿಸಿದವರು.

ಕರ್ನಾಟಕ ಉತ್ತರ ಗಡಿಭಾಗದಲ್ಲಿ ಸಾಂಸ್ಕೃತಿಕ ಮತ್ತು ವೈಚಾರಿಕ ಸಂಸ್ಥೆಗಳ ಸಂಘಟನೆಗಳನ್ನು ಮಾಡಿ. ಅವುಗಳ ಮೂಲಕ ಎಲ್ಲ ಹಂತದ ಜನಮನದ ಮೂಢನಂಬಿಕೆಗಳು ಅನಿಷ್ಠ ಸಂಪ್ರದಾಯಗಳು ಅನರ್ಥಕಾರಿಯಾದ ಅಚರಣೆಗಳು ಇತ್ಯಾದಿಗಳಲ್ಲಿಯ ಪೊಳ್ಳತನಗಳನ್ನು ಮನವರಿಕೆ ಮಾಡಿಕೊಟ್ಟು ಅವುಗಳ ನಿವಾರಣೆಗಾಗಿ ವೈಜ್ಞಾನಿಕ ಮನೋಭಾವ ಒಡಮೂಡುವಂತೆ ಸಾಪ್ತಾಹಿಕ ವ್ಯಾಖ್ಯಾನ ಮಾಲೆ, ಪ್ರಾಸಂಗಿಕ ಚರ್ಚಾಗೋಷ್ಠಿ ಮತ್ತು ಕಾರ್ಯಾಗಾರ ಇತ್ಯಾದಿಗಳ ಆಯೋಜನೆ ಹಾಗೂ ವಿಚಾರ ಸಾಹಿತ್ಯ ಕೃತಿಗಳ ಪ್ರಕಟಣೆ ಇವುಗಳ ಮೂಲಕವಾಗಿ ಪರಿಣಾಮಕಾರಿಯಾಗಿ ದುಡಿದವರು.

ಗಡಿನಾಡಿನ ಭಾಗದಲ್ಲಿ ಜಾನಪದ ಮಂಟಪ ಮತ್ತು 'ಕಾಲಗತಿ' ಹೆಸರಿನಲ್ಲಿ ಸ್ವಂತ ಸಾಹಿತ್ಯ ಪ್ರಕಾಶನಗಳನ್ನು ಕಟ್ಟಿ ಸಾಹಿತ್ಯ ಪ್ರಕಟಣೆ ಮಾಡಿದವರು ಅಲ್ಲದೆ ಸಂಘರ್ಷ ಸಾಹಿತ್ಯಕೂಟ ವಿಚಾರ ಸಾಹಿತ್ಯ ಪ್ರಕಾಶನ, ಮಾನಸ ಸಾಹಿತ್ಯ ಪ್ರಕಾಶನ, ವಿಶ್ವಜ್ಞ ಸಾಹಿತ್ಯ ಪ್ರಕಾಶನ, ಮುಂತಾದ ಹತ್ತಾರು ಸಾಹಿತ್ಯ ಪ್ರಕಾಶನಗಳ ಹುಟ್ಟಿಗೆ ಪ್ರೇರಕರಾದರು ಶಕ್ತಿಯಾದರು. ಮಾರ್ಗದರ್ಶಕರಾಗಿ, ಹಿತಚಿಂತಕರಾಗಿ ಈ ಎಲ್ಲಾ ಪ್ರಕಾಶನಗಳ ಮೂಲಕ ನೂರಾರು ಕನ್ನಡ ಗ್ರಂಥಗಳ ಗಡಿಭಾಗದಿಂದ ಪ್ರಕಟಣೆಗೊಳ್ಳಲು ಕಾರಣಕರ್ತರಾದರು. ಜಾನಪದ ಮಂಟದ ಮತ್ತು ಬೇರೆ ಸಂಘಟನೆಗಳ ವತಿಯಿಂದ ವಿವಿಧ ಬಗೆಯ ಜಾನಪದ ಸ್ಪರ್ಧೆಗಳ ಏರ್ಪಾಡು ಜಾನಪದದ ವಿವಿಧ ಪ್ರಕಾರಗಳ ಕುರಿತು ವಿಚಾರ ಸಂಕೀರ್ಣಗಳ ಸಂಘಟನೆ, ಮತ್ತು ವಿದ್ಯಾರ್ಥಿಗಳು ಹಾಗೂ ಆಸಕ್ತ ತರುಣರ ಜಾನಪದ ಅಧ್ಯಯನಕ್ಕಾಗಿ ತರಬೇತಿ ಶಿಬಿರಗಳ ಆಯೋಜನೆ ಜಾನಪದ ಸಂಗ್ರಹ ಸಂಪಾದನೆಗಾಗಿ ಹವ್ಯಾಸಿಗಳಿಗೆ ಮಾರ್ಗದರ್ಶನ ನೀಡಿದವರು.

**ಸಂಘ ಸಂಸ್ಥೆಗಳ ಸ್ಥಾಪನೆಗಳ ಕಾರ್ಯ :**

- ಹುಟ್ಟೂರು ಮತ್ತು ಸ್ವಂತ ಊರಾದ ಮುಗಳಖೋಡದಲ್ಲಿ 'ಗೆಳೆಯರ' ಬಳಗ'

ಹೆಸರಿನ ಸಂಘದ ಸ್ಥಾಪನೆ-ಸಂಸ್ಥಾಪಕ ಕಾರ್ಯದರ್ಶಿ ಮತ್ತು ೧೦ ವರ್ಷಗಳ ಕಾಲ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದರು.

- ರಾಯಬಾಗ ಕರ್ನಾಟಕ ಸಾಂಸ್ಕೃತಿಕ ಸಂಘ ಹೆಸರಿನ ಸಂಸ್ಥೆಯ ಸಂಸ್ಥಾಪಕ ಮತ್ತು ಸದ್ಯದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.
- ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘ ಇವುಗಳ ಅಜೀವ ಸದಸ್ಯರಾಗಿದ್ದಾರೆ.
- ಡಾ. ಶಂಬಾ ಜೋಶಿ ಅವರು ಸಂಸ್ಥಾಪಿಸಿದ 'ಮಾನವ ಧರ್ಮ ಪ್ರತಿಷ್ಠಾನ' ಧಾರವಾಡ ಇದರ ಸ್ಥಾಪಕರಲ್ಲಿ ಒಬ್ಬರು ಅಜೀವ ಟ್ರಸ್ಟಿಗಳು ಮತ್ತು ಮೊದಲನೇಯ ಅಧ್ಯಕ್ಷರು ಮತ್ತು ಸಧ್ಯದ ಅಧ್ಯಕ್ಷರಾಗಿದ್ದಾರೆ.
- ಬೆಳಗಾವಿಯಲ್ಲಿರುವ ಬಿ.ಎ. ಸನದಿ ಸಾಂಸ್ಕೃತಿಕ ಪ್ರತಿಷ್ಠಾನ ಇದರ ಸಂಸ್ಥಾಪಕರಲ್ಲಿ ಒಬ್ಬರು ಅಜೀವ ಟ್ರಸ್ಟಿಗಳು ಮತ್ತು ಸದ್ಯದ ಕಾರ್ಯಧ್ಯಕ್ಷರಾಗಿ ಹಲವಾರು ವಿಧಾಯಕ ಕಾರ್ಯ ಮಾಡುತ್ತಿದ್ದಾರೆ.

**ಗಡಿನಾಡಿನಲ್ಲಿ ಕನ್ನಡ ಸಾಹಿತ್ಯದ ಬಾವುಟ :**

ಗಡಿಭಾಗದಲ್ಲಿ ಮರಾಠಿ ಪ್ರಭಾವಕ್ಕೆ ಒಳಗಾಗಿದ್ದ ಈ ಪ್ರದೇಶವನ್ನು ಪ್ರೊ. ಹೊಸೂರರ ನಿರಂತರ ಉತ್ಸಾಹದಿಂದ ಸಾಹಿತ್ಯಕ್ಷೇತ್ರ ಮತ್ತು ಶೈಕ್ಷಣಿಕ ಕ್ಷೇತ್ರದಲ್ಲಿ ಉನ್ನತ ಕಾರ್ಯ ಕೈಗೊಂಡು ಕನ್ನಡದ ಬಾವುಟ ಏರಿಸಿದ ಮಹಾನ್ ವ್ಯಕ್ತಿ ಹೊಸೂರರು. ಕನ್ನಡ ಸಾಹಿತ್ಯ, ಭಾಷೆ, ಅಳಿಸಿ ಹೋಗದಂತೆ ಗಡಿಭಾಗದಲ್ಲಿ ಮರಾಠಿಗರ ಪ್ರಭಾವ ಎಷ್ಟು ಇದ್ದರು ಅದಕ್ಕೆ ಯಾವ ರೀತಿ ತಗ್ಗದೆ ಬಗ್ಗದೆ ನಿರಂತರವಾಗಿ ಭಾಷೆಯ ಏಳಿಗೆಗೆ ನಿತ್ಯ ಕಾರ್ಯಗೈದು ಕನ್ನಡ ನೆಲ ಜಲದ ಬಗ್ಗೆ ಹೆಮ್ಮೆಯ ವ್ಯಕ್ತಿಯಾಗಿ ನಿಂತ ಏಕೈಕ ಸಹಾಸಮಯ ವ್ಯಕ್ತಿ ಗಡಿಭಾಗದಲ್ಲಿ ಕನ್ನಡ ಭಾಷೆ, ಸಾಹಿತ್ಯಕ್ಕೆ ತಮ್ಮ ಸ್ವಂತ ಪ್ರಕಾಶನ, ಪತ್ರಿಕೆ, ತೆರೆದು ಕಾರ್ಯ ಮಾಡಿದವರು ಸಂಘ, ಸಂಸ್ಥೆಗಳನ್ನು ಕಟ್ಟಿ ಗಡಿನಾಡಿನಲ್ಲಿ ಕ್ರಾಂತಿಯನ್ನು ಮಾಡಿದ ವ್ಯಕ್ತಿತ್ವ ಇವರದು. ಹಲವು ಸಾಹಿತಿಗಳು ತಮ್ಮ ಬಿಡಿ ಲೇಖನಗಳನ್ನು ಪ್ರಕಟಿಸಲಾಗದೆ, ಕನ್ನಡ ಭಾಷೆ ಸಾಹಿತ್ಯ ಅವನತಿ ಹಂತದಲ್ಲಿ ಇದ್ದಾಗ ಗಡಿನಾಡಿನಲ್ಲಿ ಹೊಸೂರ ಪ್ರಕಾಶನ ಆಶ್ರಯ ನೀಡಿ ಕನ್ನಡ, ನಾಡು, ನುಡಿ, ಸಂಸ್ಕೃತಿಯನ್ನು ಎತ್ತಿ ಹಿಡಿದ ಮಹಾಕಾರ್ಯ ಇವರದಾಗಿದೆ ಎಂದು ಹೇಳಿದರೆ ತಪ್ಪಾಗಲಾರದು.

ಗಡಿನಾಡು ಭಾಗದಲ್ಲಿ ಜಾನಪದ ಸಂಗ್ರಹ ವೈಚಾರಿಕತೆ ವಿಚಾರ ಸಂಕೀರ್ಣಗಳು, ಸಂಘಟನೆ, ಶಿಬಿರಗಳನ್ನು ಆಯೋಜಿಸಿ ನಾಡು ನುಡಿಯಬಗ್ಗೆ ಜನರಲ್ಲಿ ಜಾಗೃತಿ ಮಾಡಿಸಿದವರು. ಇಂದರಿಂದ ಕನ್ನಡ ಬಾವುಟ ತಲೆಯತ್ತಿ ನಿಂತಿರುವದನ್ನು ನಾವು ಕಾಣುತ್ತೇವೆ.

**ಅಪ್ಪಟ ಕನ್ನಡ ಅಭಿಮಾನಿ :**

ಕನ್ನಡ ನಾಡು ನುಡಿಯ ಬಗ್ಗೆ ಹೊಸೂರರರು ವಿಶೇಷವಾದ ಅಭಿಮಾನ ಇಟ್ಟುಕೊಂಡಿದ್ದಾರೆ. ಹೆಚ್ಚಾಗಿ ನೇರವಾಗಿ ಕನ್ನಡದಲ್ಲಿಯೇ ಮಾತನಾಡುವ ವ್ಯಕ್ತಿ ಕನ್ನಡ ಬಲ್ಲವರು ಕನ್ನಡದಲ್ಲೇ ಮಾತನಾಡಬೇಕೆಂದು ಬಯಸುವವರು ಈಗಿನ ಜನರಲ್ಲಿರುವ ಕನ್ನಡದ ಬಗ್ಗೆ ಕೀಳರಿಮೆ, ತಿರಸ್ಕಾರ ಅಂತಾ ಮರುಗುತ್ತಾರೆ. ಆದರೆ ಇತರ ಭಾಷೆಗಳನ್ನು ವಿರೋಧಿಸುವುದಿಲ್ಲ. ವಿನಾಕಾರಣ ದೊಡ್ಡಸ್ತಿಕೆ ತೋರಿಸಲು, ಸಂಘ, ಸಂಸ್ಥೆ ಸಮಿತಿಗಳಲ್ಲಿ ಸ್ಥಾನಗಿಟ್ಟಿಕೊಂಡು ಕನ್ನಡದಲ್ಲಿಯೇ ಮಾತನಾಡದೇ ತಮ್ಮ ಮಕ್ಕಳು, ಮೊಮ್ಮಕ್ಕಳನ್ನು ಇಂಗ್ಲೀಷ ಶಾಲೆಗೆ ಕಳುಹಿಸುವ ಡೋಂಗಿಗಳ ಕನ್ನಡಕ್ಕೆ ದ್ರೋಹ ಬಗೆಯುತ್ತಿದ್ದಾರೆ ಎಂದು ಅಸಮಾಧಾನ ವ್ಯಕ್ತಪಡಿಸುತ್ತಾರೆ.

ಗಡಿನಾಡು ಭಾಗದಲ್ಲಿ ಹುಟ್ಟಿಬೆಳೆದ ಇವರು ಯಾವ ಇತರ ಭಾಷೆಗಳಿಗೆ ಬಗ್ಗದೆ ಜಗ್ಗದೆ ಧೈರ್ಯದಿಂದ ಗಡಿನಾಡಿನಲ್ಲಿ ಕನ್ನಡದ ನಾಡು ನುಡಿ ಬಗ್ಗೆ ಎತ್ತರದ ವ್ಯಕ್ತಿಯಾಗಿ ಬೆಳೆದು ನಿಂತರು ಮತ್ತು ಸಮಾಜವನ್ನು ಕನ್ನಡದ ಬಗ್ಗೆ ಹೆಚ್ಚು ಹೆಚ್ಚು ಆಸಕ್ತಿವಹಿಸಿ ಉನ್ನತ ಮಟ್ಟಕ್ಕೆ ಏರಿಸುವ ಮಹತ್ತರ ಕೆಲಸ ಮಾಡುವಲ್ಲಿ ಯಶಸ್ಸು ಕಂಡಿದ್ದಾರೆ.

ಕೊಲ್ಲಾಪೂರದ ಮರಾಠಾ ಸಂಸ್ಥಾನಿಕರ ಆಧೀನದಲ್ಲಿದ್ದು ಮರಾಠಿಮಯ ಆಗಿದ್ದ ರಾಯಬಾಗ ಪರಿಸರದಲ್ಲಿ ಕನ್ನಡ ಪ್ರಾಥಮಿಕ ಶಾಲೆ, ಸ್ಥಾಪನೆಯ ಕಾರ್ಯಕ್ಕೆ ಮೂಲ ಪ್ರೇರಕರಾಗಿ ಕನ್ನಡ ನಾಡು ನುಡಿ ಭಾಷೆಗೆ ಶ್ರಮಿಸಿದ ಮಹಾವ್ಯಕ್ತಿ ಇವರು ಎಂದು ಹೇಳಲು ಹೆಮ್ಮೆ ಎಣಿಸುತ್ತದೆ. ಹಾರುಗೇರಿಯಲ್ಲಿ ನಡೆದ ರಾಯಬಾಗ ತಾಲೂಕ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಹೊಸೂರರು, ಅಧ್ಯಕ್ಷರ ಭಾಷಣದಲ್ಲಿ ಕನ್ನಡ ನಾಡು, ನುಡಿ, ಭಾಷೆ ಬಗ್ಗೆ ಮಾತನಾಡಿದ್ದನ್ನು ಮರೆಯುವಂತಿಲ್ಲ.

**ಆಡಳಿತ :**

ಹೊಸೂರರರು ಹಾರೂಗೇರಿಯಲ್ಲಿ ಹೈಸ್ಕೂಲ ಶಿಕ್ಷಕರಾಗಿ ಸೇವೆಯನ್ನು (೧೯೬೧ ರಿಂದ ೬೮, ೧೯೭೦ ರಿಂದ ೭೨) ರವರೆಗೆ ಶಿಕ್ಷಕರಾಗಿ ವೃತ್ತಿ ಜೀವನ ಆರಂಭಿಸಿದ್ದರು. ದಕ್ಷ ಆಡಳಿತಗಾರ, ನಿಷ್ಠಾವಂತ ಶಿಕ್ಷಕರಾಗಿದ್ದರು. ನಂತರ ೧೯೭೨ ರಿಂದ ೭೪ ರವರೆಗೆ ರಾಯಬಾಗ ಜ್ಯುನಿಯರ್ ಕಾಲೇಜಿನಲ್ಲಿ ಪ್ರಾಚಾರ್ಯ ಹುದ್ದೆಗೆ ಸೇರಿಕೊಂಡು ಸಮರ್ಥ ಸೇವೆ ಸಲ್ಲಿಸಿದ್ದರು. ೧೯೭೪ ರಿಂದ ೧೯೯೩ ರ ವರೆಗೆ ರಾಯಬಾಗ ಕಲಾವಾಣಿಜ್ಯ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ, ಪ್ರವಾಚಕರಾಗಿ ಹಾಗೂ ಪ್ರಾಚಾರ್ಯರಾಗಿ ಅರ್ಥಪೂರ್ಣವಾಗಿ ಶಿಕ್ಷಣ ಕ್ಷೇತ್ರದಲ್ಲಿ ಕಾರ್ಯಮಾಡಿ ನಿಷ್ಠಾವಂತರಾಗಿ ಸೇವೆಯನ್ನು ಮಾಡಿದ್ದರು. 'ಕಾಯಕವೇ ಕೈಲಾಸ' ಎಂಬ ಗಾದೆಯು ಉಕ್ತಿಯಂತೆ ಕಾಯಕದ ಮೇಲೆ ಹೆಚ್ಚು ಶ್ರದ್ಧಾ ಭಕ್ತಿಯಿಂದ ಕೆಲಸ ಮಾಡುವುದು

ಇವರ ಗೌರವಕ್ಕೆ ಕಲಸವಿಟ್ಟಂತೆ ಕಾಣುವದಾಗಿದೆ.

**ಗೌರವ ಸದಸ್ಯತ್ವಗಳು :**

ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು ಇದರ ಸದಸ್ಯರೆಂದು ಸರಕಾರದಿಂದ ನಾಮಕರಣಗೊಂಡು ೧೯೯೨ರಿಂದ ೧೯೯೫ರ ವರೆಗೆ ಕಾರ್ಯನಿರ್ವಹಣೆ ಮಾಡಿದ್ದರು. ಧಾರವಾಡ ಆಕಾಶವಾಗಿ ಕೇಂದ್ರಕ್ಕಾಗಿ ಜಾನಪದ ಕಲಾವಿದರ ಧ್ವನಿ ಪರೀಕ್ಷಾ ಸಮಿತಿಯ ಸದಸ್ಯರೆಂದು ೧೯೯೧ರಿಂದ ೧೯೯೩ರ ವರೆಗಿನ ಅವಧಿಗೆ ನಾಮಕರಣಗೊಂಡು ಕಾರ್ಯನಿರ್ವಹಣೆ ಮಾಡಿದ್ದರು.

ಕರ್ನಾಟಕ ವಿಶ್ವವಿದ್ಯಾಲಯ (ಧಾರವಾಡ) ಸಿನೆಟ್ ಸದಸ್ಯರೆಂದು ಮಾನ್ಯ ರಾಜ್ಯ ಪಾಲರಿಂದ ಮೂರು ವರ್ಷಗಳ ಅವಧಿಗೆ ೧೯೯೬ರ ಜೂನ್ ತಿಂಗಳಲ್ಲಿ ನಾಮಕರಣ ನಾಮಕರಣಗೊಂಡು ೧೯೯೯ರ ವರೆಗಿನ ಅವಧಿಯಲ್ಲಿ ಕಾರ್ಯ ನಿರ್ವಹಣೆ ಮಾಡಿದ್ದರು. ದೇವರಾಜ ಅರಸು ಸಂಶೋಧನೆ ಸಂಸ್ಥೆ ಬೆಂಗಳೂರು ಇದರ ಸಲಹಾ ಮಂಡಳಿ ಸದಸ್ಯರೆಂದು ಸರಕಾರದಿಂದ ೧೯೯೭ರಲ್ಲಿ ನಾಮಕರಣ ೨೦೦೫ರ ವರೆಗೆ ಕಾರ್ಯನಿರ್ವಹಣೆ ಮಾಡಿದ್ದರು.

ರಾಜ್ಯ ಗ್ರಂಥಾಲಯ ಇಲಾಖೆಗಳು ಗ್ರಂಥಾಲಯಗಳ ಉನ್ನತ ಮಟ್ಟದ ಪುಸ್ತಕ ಆಯ್ಕೆ ಸಮಿತಿ ಸದಸ್ಯರನ್ನಾಗಿ ೨೦೦೧ ರಂದು ಸರಕಾರದಿಂದ ನೇಮಕ ಮಾರ್ಚ ೨೦೦೫ ರ ವರೆಗೆ ಕಾರ್ಯನಿರ್ವಹಣೆ ಮಾಡಿದ್ದರು.ಕರ್ನಾಟಕ ಕಾಗಿನೆಲೆ ಅಭಿವೃದ್ಧಿ ಟ್ರಸ್ಟಿನ್ ಸದಸ್ಯರನ್ನಾಗಿ ೨೦೦೨ ರಂದು ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ನೇಮಕವಾಗಿ ಕಾರ್ಯನಿರ್ವಹಣೆ ಮಾಡಿದ್ದರು. ಹಂಪಿಯಲ್ಲಿರುವ ಕನ್ನಡ ವಿಶ್ವವಿದ್ಯಾಲಯದಲ್ಲಿ ಸ್ಥಾಪನೆಗೊಂಡಿರುವ ಡಾ. ಶಂಬಾಜೋಷಿ ಅಧ್ಯಯನ ಪೀಠದ ಸಲಹಾ ಸಮಿತಿಯ ಸದಸ್ಯರಾಗಿ ಕುಲಪತಿಗಳಿಂದ ೨೦೦೨ ರಂದು ನಾಮಕರಣದ ಮೂಲಕ ನೇಮಕ ಮತ್ತು ಎರಡು ವರ್ಷಗಳ ಕಾಲ ಕಾರ್ಯನಿರ್ವಹಣೆ ಮಾಡಿದ್ದರು. ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ ರಚನೆಗಾಗಿ ನಿಯಮಾವಳಿಗಳನ್ನು ರೂಪಿಸುವ ಸಮಿತಿ ಸದಸ್ಯರಾಗಿ ಕಾರ್ಯನಿರ್ವಹಣೆ ೨೦೦೫ ರಲ್ಲಿ ವರದಿ ಸಕಾಲಕ್ಕೆ ಸಲ್ಲಿಕೆ ಮಾಡಿದ್ದರು. ಹೀಗೆ ಹತ್ತು ಹಲವು ಸೃಜನಾತ್ಮಕ ನೆಲೆಗಳಲ್ಲಿ ಕಾಣಿಸಿಕೊಂಡವರು ಶ್ರೀಯುತ ಜ್ಯೋತಿ ಹೊಸೂರರು.

**ಕೊನೆ ಟಿಪ್ಪಣೆಗಳು :**

೧. **ಭ್ರಮೆಗಳ ಮೇಲೆ ಬೆಳಕು.** – ಪುಟ – ೦೫ ಜ್ಯೋತಿ ಹೊಸೂರ ಕಾಲಗತಿ ಪ್ರಕಾಶನ ರಾಯಬಾಗ. ೨೦೦೫.

೨. **ಅದೇ ಪುಟ–೮.**

೩. **ಸ್ವಾತಂತ್ರ್ಯೋತ್ತರ ವಿಚಾರ ಸಾಹಿತ್ಯ** ಪುಟ-೪ ಗೌರೀಶ ಕಾಯ್ಕಿಣಿ ಸಾಹಿತ್ಯ ಪರಿಷತ್ ಬೆಂಗಳೂರು. ೧೯೮೩.

೪. **ಅದೇ ಪುಟ**-೫.

೫. **ಭ್ರಮೆಗಳ ಮೇಲೆ ಬೆಳಕು.** ಪುಟ-೧೨ ಜ್ಯೋತಿ ಹೊಸೂರ ಕಲಗತಿ ಪ್ರಕಾಶನ ರಾಯಬಾಗ. ೨೦೦೫.

೬. **ಅದೇ ಪುಟ**-೧೪-೧೫.

೭. **ಅದೇ ಪುಟ**-೧೯.

೮. **ಅದೇ ಪುಟ**-೨೦.

೯. **ಅದೇ ಪುಟ**-೩೮.

೧೦. **ಅದೇ ಪುಟ**-೩೮.

೧೧. **ಅದೇ ಪುಟ**-೩೯.

೧೨. **ಅದೇ ಪುಟ**-೪೩.

೧೩. **ಅದೇ ಪುಟ**-೪೬.

೧೪. **ಅದೇ ಪುಟ**-೪೬.

೧೫. **ಅದೇ ಪುಟ**-೫೭.

೧೬. **ಅದೇ ಪುಟ**-೫೮.

೧೭. **ಸತ್ಯಾನ್ವೇಷಕ ಡಾ. ಶಂಬಾ ಜೋಶಿ.** ಪುಟ-೫ ಜ್ಯೋತಿ ಹೊಸೂರ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. ೨೦೦೦.

೧೮. **ಅದೇ ಪುಟ**-೭-೮.

೧೯. **ಅದೇ ಪುಟ**-೬.

೨೦. **ಅದೇ ಪುಟ**-೮.

೨೧. **ಅದೇ ಪುಟ**-೧೧

೨೨. **ಸಾತ್ವಿಕ ಸಾಹಿತಿ ಡಾ. ಬೆಟಗೇರಿ ಕೃಷ್ಣಶರ್ಮ.** ಪುಟ-೬೦ ಜ್ಯೋತಿ ಹೊಸೂರ ಕಾಲಗತಿ ಪ್ರಕಾಶನ ರಾಯಬಾಗ. ೨೦೦೪.

೨೩. **ಅದೇ ಪುಟ**-೬೦.

೨೪. **ಅದೇ ಪುಟ**-೬೧.

೨೫. **ಅದೇ ಪುಟ**-೬೨.

೨೬. **ಅದೇ ಪುಟ**-೬೨.

೨೭. **ಅದೇ ಪುಟ**-೫೭.

೨೮. **ಅದೇ ಪುಟ**-೫೭.

೨೯. **ಅದೇ ಪುಟ-೬೭.**

೩೦. **ಬೀರಪ್ಪದೇವರ ಉಪಾಸಕರ ಮಾದರಿಗಳು ಮತ್ತು ಕ್ಷೇತ್ರಗಳು.** ಪುಟ-೦೬ ಜ್ಯೋತಿ ಹೊಸೂರ, ಕಾಲಗತಿ ಪ್ರಕಾಶನ ರಾಯಬಾಗ. ೨೦೦೭.

೩೧ **ಅದೇ ಪುಟ-೧೪.**

೩೨. **ಅದೇ ಪುಟ-೧೪.**

೩೩. **ಸೇವಾನುಭವ ಹೋರಾಟಗಾರ** ಪುಟ-೦೨ ಜ್ಯೋತಿ ಹೊಸೂರ ಕಾಲಗತಿ ಪ್ರಕಾಶನ ರಾಯಬಾಗ. ೨೦೦೨.

೩೪. ಅದೇ ಕೃತಿಯ ಬೆನ್ನುಡಿ ಪುಟ-

೩೫. **ಕನ್ನಡ ಜಾನಪದ ಗೀತೆಗಳು.** ಪುಟ-೧೩೩ ಡಾ. ಬಿ.ಎಸ್. ಗದಗಿನಮಠ. ೧೯೬೩.

೩೬. **ಕಾಲ** - ೨ ತ್ರೈಮಾಸಿಕ ಪತ್ರಿಕೆ ಪುಟ-೧೦೧. (ಸಂ.) ಜ್ಯೋತಿ ಹೊಸೂರ ಕಾಲಗತಿ ಪ್ರಕಾಶನ ರಾಯಬಾಗ. ೧೯೭೭.

೩೭. **ಅದೇ ಪುಟ-೧೨೨.**

೩೮. **ಕಾಲಗತಿ-೬** ತ್ರೈಮಾಸಿಕ ಪತ್ರಿಕೆ ಪುಟ-೯ (ಸಂ.) ಜ್ಯೋತಿ ಹೊಸೂರ ಕಾಲಗತಿ ಪ್ರಕಾಶನ ರಾಯಬಾಗ. ೧೯೭೯.

## ಅಧ್ಯಾಯ-೫

# ಸಮಾರೋಪ

ಆಧುನಿಕ ಸಾಹಿತ್ಯ ಪ್ರಕಾರಗಳು ಹಲವು ಆಶಯ ಮತ್ತು ಧೋರಣೆ ಇಟ್ಟುಕೊಂಡು, ಪ್ರಗತಿಪರವಾದ ಕಾಳಜಿಯ ಹಿನ್ನೆಲೆಯಲ್ಲಿ ವೈಚಾರಿಕ ನೆಲಗಟ್ಟಿನ ಮೇಲೆ ವಿಭಿನ್ನ ರೂಪಾತ್ಮಕ ನೆಲೆಗಳಲ್ಲಿ ಕಾಣಿಸಿಕೊಂಡಿದೆ. ಸಾಹಿತ್ಯ ಪ್ರಕಾರವು ತನ್ನ ರೂಪವನ್ನುತಾಳುವಲ್ಲಿ ಅನೇಕ ಸಾಹಿತಿಗಳು ಮಾಡಿದ ಕಾರ್ಯ ಮಹತ್ವದಾಗಿದೆ. ಸುಮಾರು ಐವತ್ತು ವರ್ಷಗಳ ಕಾಲ ಸಾಹಿತ್ಯ ಸೇವೆಯಲ್ಲಿ ಸೇವೆಯನ್ನು ದಣಿವರಿಯದೆ ಮಾಡುತ್ತಿರುವ ಜ್ಯೋತಿಹೊಸೂರು ಅವರು ಹೊರತಲ್ಲ. ಅವರು ಇಲ್ಲಿಯವರೆಗೆ ಅಧ್ಯಯನ ನಡೆಸಿದ ರೀತಿ ಅದ್ಭುತವಾದುದ್ದಾಗಿದೆ. ಸಂಶೋಧನೆ, ವಿಮರ್ಶೆ, ವೈಚಾರಿಕತೆಯ ಚಿಂತನ, ಜನಪದ ಸಂಗ್ರಹ, ಜನಾಂಗಿಯ ಅಧ್ಯಯನ, ಪತ್ರಿಕಾ ಸಂಪಾದನೆ, ವಿಚಾರ ಸಾಹಿತ್ಯ, ಹೀಗೆ ಹಲವು ವಿಭಿನ್ನ ನೆಲೆಗಳಲ್ಲಿ ಸಾಹಿತ್ಯಕೃಷಿಯುನ್ನು ಮಾಡಿದ ಶ್ರೇಷ್ಠಮಟ್ಟದ ಸಾಹಿತಿಯಾಗಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ.

ಹೊಸೂರು ಅವರು ಕಂಡುಕೊಂಡ ಸಾಹಿತ್ಯಕ್ಷೇತ್ರ ಕೇವಲ ಒಂದು ಪ್ರಕಾರದಲ್ಲಿಲ್ಲ. ಅದು ಹಲವು ಪ್ರಕಾರಗಳಲ್ಲಿ ಮುಂದುವರೆದಿದೆ. ಅವುಗಳ ವಿವರಣೆ ಮುಖ್ಯವಲ್ಲ ಆ ಕೃತಿಗಳ ಸತ್ವ, ವಿಚಾರಶೀಲತೆ, ಆಶಯ, ಸಾಂಸ್ಕೃತಿಕ, ಹಿನ್ನೆಲೆ ಮಹತ್ವದಾಗಿದೆ. ಈ ನಿಟ್ಟಿನಲ್ಲಿ ಈ ಅಧ್ಯಯನದಲ್ಲಿ ಅವುಗಳನ್ನು ಒಂದು ತಾತ್ವಿಕ ಹಿನ್ನೆಲೆಯ ಚೌಕಟ್ಟಿನಲ್ಲಿ ಹಿಡಿದಿಟ್ಟು ನನ್ನದೇ ಆದ ಹೊಸರೂಪವನ್ನು ನೀಡಿದ್ದೇನೆ. ಅವುಗಳನ್ನು ಈ ಕೆಳಗಿನಂತೆ ಕಂಡುಕೊಂಡಿದ್ದೇನೆ.

೧. ಜಾನಪದ ಕಳೆದು ಹೋಗಬಾರದೆಂದು ಕಾರಣದಿಂದ ಸಂಗ್ರಹಿಸಿದ್ದು, ಶಾಸ್ತ್ರೀಯವಾಗಿ ಸಂಪಾದಿಸಿದ್ದು, ಮಖ್ಯವಾಗಿದೆ. 'ಹೆಸರು ಹೇಳ್ತಿನಿ ಒಡಪು ಕಟ್ಟಿ' ಕನ್ನಡಕ್ಕೆ ಮೊಟ್ಟ ಮೊದಲು ಒಡಪು ಸಾಹಿತ್ಯವನ್ನು ಪರಿಚಯಿಸಿದ ಕೀರ್ತಿ ಶ್ರೀ ಹೊಸೂರ ಅವರಿಗೆ ಸಲ್ಲುತ್ತದೆ. ಅದರ ವಿವೇಚನೆಯನ್ನು ಈ ಕೃತಿಯಲ್ಲಿ ಮಾಡಲಾಗಿದೆ.

ಡೊಳ್ಳಿನ ಹಾಡು, ಡೊಳ್ಳಿನ ಸಂಪ್ರದಾಯ ಕನ್ನಡದಲ್ಲಿ ವಿಶಿಷ್ಟ ಬಗೆಯ ಆಚರಣೆ ಹಾಗೂ ಆರಾಧನೆ. ಬೀರದೇವರ ಆರಾಧನೆಯಲ್ಲಿ ಡೊಳ್ಳಿನ ಹಾಡುಗಳಿಗೆ ಅಗ್ರತಾಂಬೂಲ ಇದೆ. ಅದೇ ಸಮುದಾಯದಿಂದ ಬಂದಿರುವ ಜ್ಯೋತಿ ಹೊಸೂರ ಅವರು 'ಡೊಳ್ಳಿನ ಹಾಡುಗಳ ಸಮೀಕ್ಷೆ' ಕೃತಿಯನ್ನು ಕಟ್ಟಿಕೊಟ್ಟಿದ್ದಾರೆ. ಕನ್ನಡಕ್ಕೆ ಇದೊಂದು ವಿನೂತನ ಕೃತಿ. ಇಡಿಯಾಗಿ ಡೊಳ್ಳಿನ ಹಾಡುಗಳ ಕುರಿತಾಗಿ ಇಂಥದೊಂದು ಕೃತಿ ಪ್ರಕಟವಾಗಿರಲಿಲ್ಲ ಅದಕ್ಕಾಗಿ ಜ್ಯೋತಿ ಹೊಸೂರ ಅವರ 'ಡೊಳ್ಳಿನ ಹಾಡಿನ ಸಮೀಕ್ಷೆ' ಕೃತಿಗೆ ಮೌಲಿಕ ಸ್ಥಾನವಿದೆ ಆ ಕೃತಿಯನ್ನು ಇದರಲ್ಲಿ ವಿಶ್ಲೇಷಿಸಲಾಗಿದೆ.

೨. ಜಾನಪದ ಸಾಹತ್ಯವೆಂದರೆ ಸಾಮಾನ್ಯವಾಗಿ ಮೂಢನಂಬಿಕೆಗಳನ್ನು ಘೋಷಿಸಿಕೊಂಡು ಹೋಗುವಂಥದ್ದು. ದೇವರು-ಧರ್ಮಗಳ ಕುರಿತಾಗಿ ಅಪಾರ ಶ್ರದ್ಧೆ. ಅಖಂಡ ಭಕ್ತಿಗಳನ್ನು ತಾಳುವಂಥದ್ದು. ಅಲ್ಲಿ ಪ್ರಗತಿಪರ ವಿಚಾರಕ್ಕೆ ವೈಚಾರಿಕ ನಿಲವು, ವೈಜ್ಞಾನಿಕ ಮನೋಧಮಕ್ಕೆ ಅವಕಾಶವಿರುವುದಿಲ್ಲ. ಜಾನಪದ ವಿದ್ವಾಂಸರಾದ ಜ್ಯೋತಿ ಹೊಸೂರ ಅವರು ಸಾಹಿತ್ಯದ ಆರಾಧಕರಾದರೆ ವಿನಃ ಸಂಪ್ರದಾಯ ಶರಣರಾಗಿಲ್ಲ. ಪರಂಪರೆ ಪೂಜಾರಿಯಾಗಿಲ್ಲದಿರುವುದು ಗಮನಾರ್ಹವಾಗಿದೆ.

ದೇವರು-ಧರ್ಮಕ್ಕೆ ಮಹತ್ವ ನೀಡದೆ, ಮಾನವೀಯ ಮೌಲ್ಯಗಳಿಗೆ ಮಹತ್ವ ನೀಡಿರುವುದು ಅತ್ಯಂತ ಪ್ರಮುಖ ಸಂಗತಿಯಾಗಿದೆ. ಮೂಢನಂಬಿಕೆಗಳ ನಿವಾರಣೆ, ಜಡಸಂಪ್ರದಾಯಗಳ ಬದಲಾಗಿ ವೈಜ್ಞಾನಿಕ ಮನೋಧರ್ಮ ಬತ್ತಲು ಜೀವನದುದ್ದಕ್ಕೂ ಪ್ರಯತ್ನಿಸಿದ್ದು ಗಮನಾರ್ಹವಾಗಿದೆ. ಧಾರ್ಮಿಕ ಆಚರಣೆಗೆ ಒತ್ತು ಕೊಡದೆ, ಪ್ರಗತಿಪರ ಬದುಕನ್ನು ಕಟ್ಟಿಕೊಂಡದ್ದು ನಡೆ-ನುಡಿ ಒಂದಾಗಿಸಿಕೊಂಡಿರುವುದು ವಿಶಿಷ್ಟ ಸಂಗತಿಯಾಗಿದೆ. ಇವೆಲ್ಲ ಅಂಶಗಳು ಅವರ ಸಾಹಿತ್ಯದಲ್ಲಿ ಹಾಸು ಹೊಕ್ಕಾಗಿವೆ. ಅವುಗಳನ್ನು ಇದರಲ್ಲಿ ಅಧ್ಯಯನಿಸಲಾಗಿದೆ.

೩. ಬೆಳಗಾವಿ ಗಡಿಭಾಗದ ಜಾನಪದ ಸಾಹಿತ್ಯ ಸಂಗ್ರಹಿಸುವ, ಸಂಪಾದಿಸುವ ಮತ್ತು ಪ್ರಕಟಿಸುವ ಗುರುತರವಾದ ಕಾರ್ಯವನ್ನು ಇವರು ಮಾಡಿದ್ದಾರೆ. ಆಧುನಿಕ ವಿದ್ಯಾಮನಕ್ಕೆ ಸಿಕ್ಕು, ಬದುಕಿನ ಗತಿ ಬದಲಾದಾಗ ಅದರ ಜೊತೆಗಿದ್ದ ಕ್ರಿಯಾತ್ಮಕ ಜಾನಪದ ನಶಿಸಲಾಗರಂಭಿಸಿತ್ತು. ಅಂಥ ಸಂದರ್ಭದಲ್ಲಿ ಜಾನಪದ ಸಂರಕ್ಷಣೆ ಮಾಡಿದ್ದು, 'ಬೆರೆಸಿ ಇಟ್ಟೇನ ಬೆಲ್ಲ ನೆನಗಡಲಿ' ಸಂಗ್ರಹಿಸಿದ್ದು ಗಮನಾರ್ಹವಾಗಿದೆ. "ಜಾನಪದ ಮಂಟಪ' ಮಾಲೆ ಹುಟ್ಟು ಹಾಕಿ ಏಳು ಗ್ರಂಥಗಳನ್ನು ಪ್ರಕಟಿಸಿದ್ದು, ಇತರರ ಕೃತಿಗಳನ್ನು ಹೊರತಂದದ್ದು, ಜಾನಪದ ಸಾಹಿತ್ಯ ಸಂರಕ್ಷಣೆಯ ನಿಟ್ಟಿನಲ್ಲಿ ಇವೆಲ್ಲ ಪ್ರಮುಖ ಅಂಶಗಳಾಗಿವೆ.

ವೈಚಾರಿಕ-ವೈಜ್ಞಾನಿಕ ಮನೋಭಾವದ ಜ್ಯೋತಿ ಹೊಸೂರ ವಿಮರ್ಶಕರಾಗಿಯೂ ಗಮನಾರ್ಹ ಕೊಡುಗೆ ನೀಡಿದ್ದಾರೆ. 'ಅಂತಃಸತ್ವದ ಸಾಧಕ ಕನಕದಾಸ', 'ಜಾನಪದ ಉಪಾಸನೆ' ಪ್ರಮುಖ ಗ್ರಂಥಗಳಾಗಿವೆ ಒಂದು ಸಂದರ್ಭದಲ್ಲಿ ಕನಕದಾಸ 'ಕಬ್ಬಲಿಗ'ವೆಂದು ಕನಕದಾಸ 'ಬೇಡ' ಸಮುದಾಯನೆಂಬ ವಾದ ತೀವ್ರವಾಗಿ ವಿವಾದವಾಗಿತ್ತು. ಜ್ಯೋತಿ ಹೊಸೂರ ಅವರು ಕನಕದಾಸರ ಸಾಹಿತ್ಯವನ್ನು ಆಳವಾಗಿ ಅಧ್ಯಯನಿಸಿ, ಆಂತರಿಕ ಹಾಗೂ ಬಾಹ್ಯ ಪ್ರಮಾಣಗಳನ್ನು ಕ್ರೋಢಿಕರಿಸಿ ಕನಕದಾಸರು 'ಕುರುಬ' ಜನಾಂಗಕ್ಕೆ ಸೇರಿದ ವ್ಯಕ್ತಿಯೆಂದು ಸಾಧಿಸಿದ್ದು ಐತಿಹಾಸಿಕ ಅಂಶವಾಗಿದೆ. ಹಾಲು ಮತಕ್ಕೆ ಶ್ರೀಯುತರು ನೀಡಿದ ಬಹುದೊಡ್ಡ ಕೊಡುಗೆಯಾಗಿದೆ. ಈ ಅಂಶವನ್ನಿದರಲ್ಲಿ ವಿವರಸಲಾಗಿದೆ. 'ಕನಕದಾಸರ ಜೀವನ ವಿಚಾರ'ವು ವಿಮರ್ಶೆಗೆ ವಿಮರ್ಶೆಯಾಗಿ, ಸಂಶೋಧನೆಗೆ ಸಂಶೋಧನೆಯಾಗಿ, ತೌಲನಿಕಕ್ಕೆ ತೌಲನಿಕ ಕೃತಿಯಾಗಿ ನಿಲ್ಲುತ್ತದೆಯೆಂಬುದನ್ನು ಆಧಾರ

ಸಹಿತವಾಗಿ ಇದರಲ್ಲಿ ವಿವೇಚಿಸಲಾಗಿದೆ.

೪. ಇತ್ತೀಚೆಗೆ ಬುಡಕಟ್ಟು ಅಧ್ಯಯನ ಅಥವಾ ಜನಾಂಗೀಕ ಅಧ್ಯಯನ ತೀವ್ರತರವಾಗಿ ನಡೆದಿದೆ. ಆದರೆ ಕಾಲು ಶತಮಾನದ ಹಿಂದೆಯೆ ಹೊಸೂರ ಅವರು 'ಜಾತಿಗಾರರ ಜಾತಕ' ವೆಂಬ ಜನಾಂಗೀಕ ಅಧ್ಯಯನ ಕೃತಿಯನ್ನು ಪ್ರಕಟಿಸಿದರು. ಅಂದು ಅವರು ಕೈಗೊಂಡ ಕ್ಷೇತ್ರಕಾರ್ಯ ಸಂಗ್ರಹಿಸಿದ ಮಾಹಿತಿ, ವಿವರಿಸಿದ ರೀತಿ ಎಲ್ಲವೂ ಕನ್ನಡಕ್ಕೆ ಹೊಚ್ಚ ಹೊಸ ಸಂಗತಿಗಳಾಗಿವೆ. ಜನಾಂಗೀಕ ಅಧ್ಯಯನ ಕೈಗೊಳ್ಳುವವರಿಗೆ ಶ್ರೀಯುತರ ಕೃತಿ ಮಹತ್ವದ ಆಕರ ಸಾಮಗ್ರಿಯಾಗಿದೆ. ಈ ಅಂಶವನ್ನು ಈ ಅಧ್ಯಯನದಲ್ಲಿ ವಿವರಿಸಲಾಗಿದೆ.

೫. ಹಾಲುಮತ ಪಂಥದ ದೇವರುಗಳು ಹಾಗೂ ಸುಕ್ಷೇತ್ರಗಳ ವಿಶೇಷ ಅಧ್ಯಯನ ಕೈಗೊಂಡಿದ್ದಾರೆ. 'ಬೀರಪ್ಪ ದೇವನ ಉಪಾಸಕರ ಮಾದರಿಗಳು ಮತ್ತು ಕ್ಷೇತ್ರಗಳು' ಈ ಕೃತಿಯಲ್ಲಿ ಐತಿಹಾಸಕ ವ್ಯಕ್ತಿಗಳ ಸಾಧನೆಯನ್ನು ವಿವರಿಸಿ, ಸಾಂಸ್ಕೃತಿಕ ಮಹತ್ವವನ್ನು ದಾಖಲಿಸಿದ್ದಾರೆ. 'ಗೋಲ್ಗೇರಿ ಗೊಲ್ಲಾಳ', 'ಹಲಜಂತಿ ಮಾಳಪ್ಪ,' 'ಪಟ್ಟಣ ಕಡೋಲಿಯ ಇಟ್ಟಪ್ಪ' ಹೀಗೆ ಮೂವರು ವ್ಯಕ್ತಿಗಳ ಮಹತ್ವ ಹಾಗೂ ಮೂರು ಕ್ಷೇತ್ರಗಳ ವೈಶಿಷ್ಟ್ಯಗಳನ್ನು ಇದರಲ್ಲಿ ದಾಖಲಿಸಿದ್ದಾರೆ. ಮಾನವರು ದೈವತ್ಯಕೇರಿದ ಅಂಶಗಳನ್ನು ವಿವರಿಸಿದ್ದಾರೆ. ಕನ್ನಡಕ್ಕೆ ಇದು ಹೊಸದಾಗಿದೆ.

ಡಾ. ಶಂಬಾ ಜೋಷಿ ಡಾ. ಗೌರೀಶ ಕಾಯ್ಕಿಣಿ ಮತ್ತು ಡಾ.ಎ.ಎನ್. ಮೂರ್ತಿರಾವ್ ಕನ್ನಡದಲ್ಲಿ ವೈಚಾರಿಕ ಚಿಂತನಶೀಲ ಸಾಹಿತಿಗಳೆಂದು ಹೆಸರು ವಾಸಿಗಳಾಗಿದ್ದಾರೆ. ಇವರ ಮಾನವೀಯ ಮೌಲ್ಯಗಳು ಹಾಗೂ ವೈಚಾರಿಕ ಪಥವನ್ನು ಮುಂದುವರೆಸಿದವರಲ್ಲಿ ಜ್ಯೋತಿ ಹೊಸೂರ ಓರ್ವರಾಗಿದ್ದಾರೆ. ಕುವೆಂಪು ಅವರ ವಿಶ್ವಮಾನವ ಪಥದ ಮುಂದುವರಿಕೆಯಾಗಿ, 'ಭ್ರಮೆಗಳ ಮೇಲೆ ಬೆಳಕು' ಕೃತಿ ರೂಪಿಸಿದ್ದಾರೆ. ಅದನ್ನು ವಿಸ್ತೃತವಾಗಿ ಚರ್ಚಿಸಲಾಗಿದೆ.

೬. ಜನಪದ ಸಾಹಿತ್ಯದಲ್ಲಿ ಹೊಸ ಹೊಸ ವಿಧಾನವನ್ನು ಅಳವಡಿಸಿಕೊಂಡು ಸಹೃದಯರಿಗೆ ಪರಿಚಯಿಸಿದ್ದಾರೆ.

೭. ಒಂದು ಸಂಸ್ಕೃತಿಯಲ್ಲಿ ಜನರ ಆಚಾರ, ವಿಚಾರ, ನಂಬಿಕೆ, ಅಪನಂಬಿಕೆ, ಮುಂತಾದ ಮೌಲ್ಯವನ್ನು ಜನಪದ ಹಾಡುಗಳಲ್ಲಿ ಗುರುತಿಸಿ ಅದಕ್ಕೊಂಡು ವಿಶಿಷ್ಟ ಮೆರಗನ್ನು ನೀಡಿದ್ದಾರೆ.

೮. ಜನಪದ ಹಾಡುಗಳಲ್ಲಿ ಅವಿತಿರುವ ಸಾಮಾಜಿಕ ಆಯಾಮಗಳನ್ನು ತಲಸ್ಪರ್ಶಿಯಾಗಿ ವಿವೇಚಿಸಿ, ಭಿನ್ನ ಭಿನ್ನ ರೂಪದಲ್ಲಿ ಕಟ್ಟಿಕೊಡುವ ಕಾರ್ಯ ಮಾಡಿದ್ದಾರೆ.

೯. ಜನಪದ ಸಾಹಿತ್ಯ ನೆಲೆಯಲ್ಲಿ ವೈಚಾರಿಕ ಪ್ರಜ್ಞೆಯನ್ನು ತಂದು ಹೊಸದೊಂದು ವಿಚಾರವನ್ನು ನೀಡಿದ್ದಾರೆ.

ಈ ರೀತಿಯಾಗಿ ಜ್ಯೋತಿ ಹೊಸೂರ ಅವರು ಜಾನಪದ ಮತ್ತು ವೈಚಾರಿಕ ಕ್ಷೇತ್ರದಲ್ಲಿ ಕನ್ನಡಕ್ಕೆ ಅನನ್ಯವಾದ ಕೊಡುಗೆ ನೀಡಿದ್ದರೂ ಅವರಿಗೆ ಸಾಹಿತ್ಯಕ ನ್ಯಾಯ ಸಂದಾಯವಾಗಿಲ್ಲ. ಅವರ ಸಾಹಿತ್ಯದ ಚರ್ಚೆಯಾಗಿಲ್ಲ. ಸಲ್ಲಬೇಕಾದ ಗೌರವ ಪ್ರಶಸ್ತಿಗಳು ಸಂದಿಲ್ಲ. ಆದ್ದರಿಂದ ಉಪೇಕ್ಷಿತ ಸಾಹಿತ್ಯವನ್ನು ಅಧ್ಯಯನಿಸುವುದು, ಅಧ್ಯಯನದ ಮೂಲಕ ಸಾಹಿತ್ಯಿಕ ನ್ಯಾಯ ಒದಗಿಸುವುದು ಈ ಅಧ್ಯಯನದ ಪ್ರಮುಖ ಆಶಯವಾಗಿದೆ. ಇಷ್ಟೆಲ್ಲ ಸಾಹಿತ್ಯ ಕೆಲಸ ಕಾರ್ಯವನ್ನು ಮಾಡಿದ ಮತ್ತು ಮಾಡುತ್ತಿರುವ ಶ್ರೀಯುತ ಜ್ಯೋತಿ ಹೊಸೂರ ಅವರ ಕಾರ್ಯ ಮೆಚ್ಚವಂಥದ್ದು. ಇನ್ನು ಅವರ ಸಮಗ್ರ ಸಾಹಿತ್ಯ ಕುರಿತು ಅನೇಕ ರೀತಿಯಲ್ಲಿ ಮುಂದಿನ ಅಧ್ಯನಕಾರರು ತಮ್ಮ ಅಧ್ಯಯನಗಳನ್ನು ಮುಂದುವರೆಸಬಹುದಾಗಿದೆ.

೧. ಜ್ಯೋತಿ ಹೊಸೂರ ಹಾಗೂ ಸಮಕಾಲಿನ ಸಂಪಾದನಾ ಸಾಹಿತ್ಯ

೨. ಜ್ಯೋತಿ ಹೊಸೂರರವರ ಸಂಶೋಧನಾ ವಿಧಾನ.

೩. ಜ್ಯೋತಿ ಹೊಸೂರರವರ ಜಾನಪದ ಜನಾಂಗೀಯ ಅಧ್ಯಯನ 'ಜಾತಿಗಾರ ಜಾತಕ' ವಿವೇಚನೆ.

೪. ಜ್ಯೋತಿ ಹೊಸೂರರವರ ಬಿಡಿ ಲೇಖನ ಅಧ್ಯಯನ

ಒಂದು ಜಾನಪದ ಸಂಗ್ರಹ, ವೈಚಾರಿಕ ಚಿಂತನೆಗಳು, ಜನಾಂಗೀಕ ಅಧ್ಯಯನ, ಸಂಶೋಧನಾತ್ಮಕ, ವಿಮರ್ಶಾತ್ಮಕ, ಸಂಘಟನೆ, ಪತ್ರಿಕಾನೆಲೆ, ಸಾಂಸ್ಕೃತಿಕ ನೆಲೆಯಲ್ಲಿ ಹೊಸೂರರು ವಿಶಿಷ್ಟ ಪೂರ್ಣವಾದ ಕಾರ್ಯ ಕೈಗೊಂಡಿದ್ದು ಪ್ರಶಂಸನೀಯವಾಗಿದೆ. ಹೀಗೆ ವಿಭಿನ್ನ ನೆಲೆಗಳನ್ನು ಇಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ಕನ್ನಡ ಸಾಹಿತ್ಯದಲ್ಲಿ ಅವರು ಬರಹಗಾರರಾಗಿ, ಸಂಪಾದಕರಾಗಿ, ಸಂಘಟಕರಾಗಿ ಮಾಡಿದ ಕಾರ್ಯ ವಿಶಿಷ್ಟವಾದದ್ದು. ಹೊಸೂರರ ಬಗ್ಗೆ ಸಂಕ್ಷಿಪ್ತವಾಗಿ ಸಮೀಕ್ಷೆ ಮಾಡಲಾಗಿದ್ದು, ವ್ಯಾಪ್ತಿಗೆ ಅನುಗುಣವಾಗಿ ಸಂಕ್ಷಿಪ್ತಗೊಳಿಸಲಾಗಿದೆ.

ಇದೇ ರೀತಿ ಉಪೇಕ್ಷೆಗೊಳಗಾದ ಸಾಹಿತ್ಯದ ಬಳಗ ನಾಡಿನ ತುಂಬ ಚೆಲ್ಲವರೆದಿದೆ. ಅವರ ಸಾಹಿತ್ಯದ ವಿಭಿನ್ನ ನೆಲೆಗಳನ್ನು ಅಧ್ಯಯನಿಸಲು ಅವಕಾಶವಿದೆ. ಜ್ಯೋತಿ ಹೊಸೂರ ಅವರ ಪತ್ರಿಕಾಸಾಹಿತ್ಯ, ವಿಮರ್ಶಾಸಾಹಿತ್ಯ, ಸಂಶೋಧನಾಸಾಹಿತ್ಯ, ಸಂಪಾದನಾ ಸಾಹಿತ್ಯ ಇತ್ಯಾದಿ ಪ್ರತ್ಯೇಕವಾಗಿ ಅಧ್ಯಯನಿಸಲು ಮುಕ್ತ ಅವಕಾಶವಿದೆ. ಆಸಕ್ತರು ಅವುಗಳನ್ನು ಕೈಗೆತ್ತಿಕೊಳ್ಳಬಹುದು.

# ಅನುಬಂಧಗಳು

೧. ಹೊಸೂರರ ಕೃತಿಗಳು.

೨. ಹೊಸೂರರ ಜೀವನದ ಮುಖ್ಯ ಘಟನೆಗಳು.

೩. ಗ್ರಂಥಋಣ.

## ಅನುಬಂಧ–೧

### ೧.೧ : ಹೊಸೂರರ ಕೃತಿಗಳು

**ಜಾನಪದ ಸಂಗ್ರಹ**

೧. ಬೆರಸಿ ಇಟ್ಟೀನ ಬೆಲ್ಲ ನೆನೆಗಡಲಿ (೧೯೬೯)
(ಜಾನಪದ ತ್ರಿಪದಿ ಸಂಕಲನ)

೨. ಹೆಸರ ಹೇಳ್ತಿನಿ ಒಡಪಕಟ್ಟಿ (೧೯೭೧)
(ಜಾನಪದ ಒಡಪುಗಳ ಸಂಗ್ರಹ)

**ಸಂಶೋಧನಾತ್ಮಕ ವಿಮರ್ಶಾತ್ಮಕ ಕೃತಿಗಳು**

೧. ಜಾನಪದ ಉಪಾಸನೆ (೧೯೮೧)
(ಸಂಶೋಧನಾತ್ಮಕ – ವಿಮರ್ಶಾತ್ಮಕ ಲೇಖನಗಳ ಸಂಗ್ರಹ)

೨. ಜಾನಪದ ಕುರಿತು (೧೯೮೬)
(ಸಂಶೋಧನಾಥ್ಮಕ – ವಿಮರ್ಶಾತ್ಮಕ ಲೇಖನಗಳ ಸಂಕಲನ)

೩. ಕನಕದಾಸ ಜೀವನ ವಿಚಾರ (೧೯೮೩)
(ಸಂಶೋಧನಾತ್ಮಕ ಚರಿತ್ರೆ)

**ವೈಚಾರಿಕ ಕೃತಿ**

೧. ಭ್ರಮೆಗಳ ಮೇಲೆ ಬೆಳಕು (೨೦೦೫)

**ಜೀವನ ಚರಿತ್ರೆ**

೧. ಸತ್ಯಾನ್ವೇಷಕ ಡಾ॥ ಶಂ.ಬಾ.ಜೋಶಿ. (೨೦೦೦)

೨. (ಶ್ರೀ ಜಿ.ಎಸ್. ಎಸ್. ಹಿಟ್ಟಣಗಿ ಅಜ್ಜನ ಜೀವನ ಚರಿತ್ರೆ)

೩. ಸಾತ್ವಿಕ ಸಾಹಿತಿ ಡಾ॥ ಬೆಟಗೇರಿ ಕೃಷ್ಣಶರ್ಮ (೨೦೦೪)

**ಜನಾಂಗಿಕ ಅಧ್ಯಯನ**

೧. ಜಾತಿಗಾರರ ಜಾತಕ (೧೯೮೫)
(ಜನಪದ ವೃತ್ತಿ ಕಲಾವಿದರ ಜನಾಂಗಿಕ ಅಧ್ಯಯನ)

**ಸಂಪಾದನೆ**

೧. ಶಿವಶರಣರ ಕ್ರಾಂತಿಕಾರಿ ಮೌಲಿಕ ವಚನಗಳ (೨೦೦೨)
(ವಿಷಯಾಧಾರವಾಗಿ ವಿಭಾಗಿಸಿ ಆಯ್ದ ವಚನಗಳ ಸಂಪದಾನೆ)

೨. ದತ್ತಗೌರವ (೨೦೦೪)
(ಡಿ.ಬಿ. ಪತ್ತಾರ ಸಂಭಾವನಾಗ್ರಂಥ)

೩. ಸ್ನೇಹ ಸಂಪದ (೧೯೯೬)

(ಬಿ.ಎ. ಸನದಿ ಅಭಿನಂದನ ಸಂಪುಟ)

೪. ಶಂಕರಾಭಿನಂದನ (೧೯೯೭)

(ಎಸ್.ಬಿ. ಪಾಟೀಲ ಸಂಭಾವನಾ ಗ್ರಂಥ)

**ಇತರರೊಂದಿಗೆ ಸಂಪಾದನೆ**

೧. ಹೀಚು ಹಣ್ಣು (೧೯೭೯) (ಕಥಾ ಸಂಕಲನ)

೨. ಬೆಳುವಲ (೧೯೮೨) (ಡಾ॥ ಬೆಟಗೇರಿ ಕೃಷ್ಣಶರ್ಮ ಅಭಿನಂದನ ಗ್ರಂಥ)

೩. ಕವಿಭೂಷಣ (೧೯೮೨) (ಡಾ॥ ಬೆಟಗೇರಿ ಸತ್ಕಾರ ಸಂಸ್ಮರಣ ಸಂಚಿಕೆ)

೪. ಪ್ರಜ್ಞಾ ಪ್ರಕಾಶ (೧೯೮೨) (ಸಂಸ್ಮರಣ ಸಂಚಿಕೆ)

**ವ್ಯಕ್ತಿತ್ವ ಚಿತ್ರಣ**

೧. ಅಂತಃಸತ್ತ್ವದ ಸಾಧಕ ಕನಕದಾಸ (೨೦೦೬)

೨. ಬೀರಪ್ಪ ದೇವನ ಮೂವರು ಭಕ್ತರು ಪರಿಚಯ.

**ಡೊಳ್ಳಿನ ಹಾಡು ಸಮೀಕ್ಷೆ**

೧. ಡೊಳ್ಳಿನ ಹಾಡುಗಳ ಸಮೀಕ್ಷೆ – ( ೨೦೦೩)

## ಅನುಬಂಧ-೨

# ಹೊಸೂರರ ಜೀವನದ ಮುಖ್ಯ ಘಟನೆಗಳು

೧. ೦೧-೦೬-೧೯೩೯ ಜನನ ರಾಯಬಾಗ ತಾಲೂಕಿನ ಮುಗಳಖೋಡ ಗ್ರಾಮ. ತಂದೆ: ಶಿವಪ್ಪ, ತಾಯಿ: ಸತ್ತೆವ್ವ

೨. ೧೯೬೭ ರಲ್ಲಿ ಬಿ.ಎ. ಪದವಿ ಕ.ವಿ.ವಿ. ಧಾರವಾಡ.

೩. ೧೯೭೦ ರಲ್ಲಿ ಎಂ.ಎ. ಪದವಿ. ಕ.ವಿ.ವಿ. ಧಾರವಾಡ.

೪. ೧೯೬೯ ರಲ್ಲಿ 'ಬೆರಸಿ ಇಟ್ಟೀನ ಬೆಲ್ಲ ನೆನೆಗಡಲಿ' ಜಾನಪದ ತ್ರಿಪದಿ ಸಂಗ್ರಹ

೫. ೧೯೬೧-೬೮ ಹಾರೂಗೇರಿ ವಿದ್ಯಾಲಯದಲ್ಲಿ ಹೈಸ್ಕೂಲ ಶಿಕ್ಷಕ.

೬. ೧೯೭೨-೭೪ ಪದವಿಪೂರ್ವ ಕಾಲೇಜು ಪ್ರಾಚಾರ್ಯ ಹುದ್ದೆಗೆ ಏರಿದ್ದು

೭. ೧೯೭೪ ರಿಂದ ೧೯೯೩ ಪದವಿಕಾಲೇಜ ರಾಯಬಾಗದಲ್ಲಿ ಉಪನ್ಯಾಸಕ, ಪ್ರಾಚಾರ್ಯರಾಗಿ ಸೇವೆ.

೮. ೧೯೯೪ ಸ್ವ-ಇಚ್ಚಾ ಸೇವಾ ನಿವೃತ್ತಿ.

೯. ೧೯೭೭-೭೯ 'ಕಾಲಗತಿ' ಪತ್ರಿಕೆ ಸಂಪದಾನೆ.

೧೦. ೧೯೮೯-೯೦ ಜನಪದ ತಜ್ಞ ಪ್ರಶಸ್ತಿ.

೧೧. ೨೦೦೨ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ.

೧೨. ೨೦೦೪-೦೮ ಸಿರಿಗನ್ನಡ ಪುರಸ್ಕಾರ

೧೩. ೨೦೦೧ ರಾಯಬಾಗ ತಾಲೂಕ ಮಟ್ಟದ ಕನ್ನಡ ಸಾಹಿತ್ಯ ಸಮ್ಮೇಳನ ಅಧ್ಯಕ್ಷರು

೧೪. ೧೯೮೨-೯೫ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಸದಸ್ಯ.

೧೫. ೧೯೯೧-೯೩ ಧಾರವಾಡ ಆಕಾಶವಾಣಿ ಕೇಂದ್ರಕ್ಕಾಗಿ ಜಾನಪದ ಕಲಾವಿದರ ಧ್ವನಿ ಪರೀಕ್ಷಾ ಸಮಿತಿ ಸದಸ್ಯ

೧೬. ೧೯೯೬-೯೯ ಕರ್ನಾಟಕ ವಿಶ್ವವಿದ್ಯಾಲಯ ಸಿನೆಟ್ ಸದಸ್ಯ.

೧೭. ೧೯೯೭-೨೦೦೫ ದೇವರಾಜ ಅರಸರ ಸಂಶೋಧನ ಸಂಸ್ಥೆಯ ಸಲಹಾ ಮಂಡಳಿ ಸದಸ್ಯ.

೧೮. ೨೦೦೧-೨೦೦೫ ಗ್ರಂಥಾಲಯದ ಪ್ರಸ್ತಕ ಆಯ್ಕೆ ಸಮಿತಿ ಸದಸ್ಯರಾಗಿದ್ದರು.

೧೯. ೨೦೦೨. ಕನಕದಾಸರ ಕಾಗಿನೆಲೆ ಟ್ರಸ್ಟಿನ ಸದಸ್ಯರಾಗಿದ್ದರು.

೨೦. ೨೦೦೨ ಕನ್ನಡ ವಿಶ್ವವಿದ್ಯಾಲಯ ಹಂಪಿ. ಡಾ. ಶಂಬಾ ಜೋಷಿ ಪೀಠದ ಸಲಹಾ ಸಮತಿ ಸದಸ್ಯರಾಗಿ ಆಯ್ಕೆ.

೨೧. ೨೦೦೫ ಕಾಗಿನಲೆ ಅಭಿವೃದ್ಧಿ ಪ್ರಾಧಿಕಾರ ರಚನೆಗಾಗಿ ನಿಯಮಾವಳಿ ರಚನೆ ಸಮಿತಿ ಸದಸ್ಯರಾಗಿದ್ದರು.

೨೨. ೨೦೦೮ ಹಾಲುಮತ ಸಂಸ್ಕೃತಿ ಸಮ್ಮೇಳನ ಸರ್ವಾಧ್ಯಕ್ಷರು.

ಅನುಬಂಧ – ೩

## ಗ್ರಂಥ ಋಣ


೧. ಅಕ್ಕಿ ಚಂದ್ರಶೇಖರ (ಸಂ) – **ಹಾಲುಬಾನು,** ವಿದ್ಯಾನಿಧಿ ಪ್ರಕಾಶ ಗದಗ. ೨೦೦೪.

೨. ಇಮ್ರಾಪೂರ ಸೋಮಶೇಖರ – **ಜಾನಪದ ಆಲೋಕನ,** ಸಿ.ವಿ.ಜಿ. ಪಬ್ಲಿಕೇಶನ್ ೨೦೦೨.

೩. ಇಮ್ರಾಪೂರ ಸೋಮಶೇಖರ – **ಜಾನಪದ ಸಾಹಿತ್ಯ ದರ್ಶನ,** ಭಾಗ–೨೪ ಪ್ರಸಾರಂಗ ಕ.ವಿ.ವಿ ಧಾರವಾಡ. – ೨೦೦೧.

೪. ಕಂಬಾರ ಚಂದ್ರಶೇಖರ **ಕನ್ನಡ ಶೈಲಿ ಕೈಪಿಡಿ,** ಪ್ರಸಾರಂಗ ಕನ್ನಡ ವಿ.ವಿ. ಹಂಪಿ – ೨೦೦೬.

೫. ಕಲಬುರ್ಗಿ ಎಂ.ಎಂ. **ಜಾನಪದ ಮಾರ್ಗ,** ಪ್ರಿಂಟಿಂಗ್ & ಪಬ್ಲಿಕೇಶನ್ ಮೈಸೂರ – ೧೯೯೫.

೬. ಕೃಷ್ಣಮೂರ್ತಿ ಕೆ. (ಸಂ) **ಕವಿರಾಜಮಾರ್ಗ,** ೧೯೮೩. ಐ.ಬಿ.ಎಚ್. ಪ್ರಕಾಶನ ಬೆಂಗಳುರು.

೭. ಗುಂಜಾಳ ಎಸ್.ಆರ್. **ಬೆಳಗಾವಿ ಬೆಳಕು,** ಸಂ. ೨೦೦೩–ಕನ್ನಡ ಸಾ.ಪ. ಬೆಂಗಳೂರು.

೮. ಚಿಲುಮಿ ಆರ್.ಬಿ. **ಬ.ಗಿ. ಯಲ್ಲಟ್ಟಿ. ಸಮಗ್ರ ಸಾಹಿತ್ಯ,** ಶ್ರೀ ವೀರಬದ್ರೇಶ್ವರ ಪ್ರಕಾಶನ ಹಾರೂಗೇರಿ.೨೦೦೭.

೯. ಜೋಶಿ ಶಂಬಾ **ಕಂನುಡಿಯ ಹುಟ್ಟು,** ಸಮಾಜ ಪುಸ್ತಕಾಲಯ ಧಾರವಾಡ – ೧೯೬೨.

೧೦. ತರಕೇರಿ ರಹಮತ್ **ಕನ್ನಡ ಸಂಶೋಧನೆ ತಾತ್ವಿಕ ವಿಚಾರ,** ಪ್ರಸಾರಂಗ ಕನ್ನಡ ವಿ.ವಿ. ಹಂಪಿ–೨೦೦೭.

೧೧. ದೈವಜ್ಞ ಗಂಗಾಧರ **ಸಣ್ಣಾಟಗಳು ಹುಟ್ಟು ಬೆಳವಣಿಗೆ,** ಪ್ರಸಾರಂಗ ಕನ್ನಡ ವಿ.ವಿ. ಹಂಪಿ. ೨೦೦೬.

೧೨. ದಂಡೆ ವೀರಣ್ಣ (ಸಂ.) **ಜಾನಪದ ಶಾಸ್ತ್ರ** ಸಿದ್ಧಾಂತಗಳು, ನೆಲೆಮನೆ ಪ್ರಕಾಶನ ಮಂಡ್ಯ– ೧೯೯೯.

೧೩ ದಳವಾಯಿ ರಾಜಪ್ಪ (ಸಂ.) **ಕನ್ನಡ ಸಾಹಿತ್ಯ ಕೋಶ,** ಕದಿರು ಪ್ರಕಾಶನ ಮೈಸೂರ – ೧೯೯೮.

೧೪. ನರೋಡೆ ಅಶೋಕ **ಏಕಲವ್ಯನ ಪಾತ್ರ ಒಂದು ಅಧ್ಯಯನ,** ಶ್ರೀ ಸಿದ್ದೇಶ್ವರ ಪ್ರಕಾಶನ ೨೦೦೧.

೧೫. ನಾವಲಗಿ ಸಿ.ಕೆ. **ವಚನಸಾಹಿತ್ಯ ಮತ್ತು ಜನಪದ,** ಕರ್ನಾಟಕ ಜನಪದ & ಯಕ್ಷಗಾನ ಅಕಾಡೆಮಿ ಬೆಂಗಳೂರು. ೧೯೯೭

೧೬. ನಾವಲಗಿ ಸಿ.ಕೆ. **ಜನಾಪದ ಸಮಾಲೋಕ,** ಕನಕಸಾಹಿತ್ಯ ಪ್ರತಿಷ್ಠಾನ ಬೆಂಗಳೂರು – ೨೦೦೩

೧೭. ನಾಗಭೂಷಣ ಸ್ವಾಮಿ (ಸಂ) **ವಚನ ಸಾವಿರ,** ಪ್ರಸಾರಂಗ ಕನ್ನಡ ವಿ.ವಿ. ಹಂಪಿ–೨೦೦೪.

೧೮. ನಾಗರಾಜ ಡಿ.ಆರ್. **ಅಮೃತ ಮತ್ತು ಗರುಡ,** ಅಕ್ಷರ ಪ್ರಕಾಶನ ೧೯೮೩.

೧೯. ಮುಗಳಿ ರಂ.ಶ್ರೀ – **ಕನ್ನಡ ಸಾಹಿತ್ಯ ಚರಿತ್ರೆ,** ಸಮಾಜ ಪ್ರಕಾಶನ ಧಾರವಾಡ – ೧೯೯೬

೨೦ ಮಹಾಬಲೇಶ್ವರಾವ್ **ಸಂಶೋಧನೆ ಮಾರ್ಗ,** ನವ ಕರ್ನಾಟಕ ಪ್ರಕಾಶನ – ೨೦೦೦.

೨೧. ಮಾಳಿ ವ್ಹಿ.ಎಸ್. **ರಸಾಲ,** ಶ್ರೀಗುರು ಚನ್ನಬಸವೇಶ್ವರ ಗ್ರಂಥ ಮಾಲೆ ಆಥಣಿ ೨೦೦೫.

೨೨. ಮೈತ್ರಿ ಕ.ಎಂ. (ಸಂ) **ಬುಡಕಟ್ಟು ಕುಲಕಸುಬುಗಳು,** ಪ್ರಸಾರಂಗ ಕನ್ನಡ ವಿ.ವಿ. ಹಂಪಿ ೨೦೦೨.

೨೩. ಮಹಾದೇವಯ್ಯಾ ಪಿ. (ಸಂ) **ದಲಿತರು ಭಾಷೆ ಮತ್ತು ಸಮಾಜ,** ಪ್ರಸಾರಂಗ ಕನ್ನಡ ವಿ.ವಿ. ಹಂಪಿ ೨೦೦೬.

೨೪. ಮೈತ್ರಿ ಕೆ.ಎಂ. **ಬುಡಕಟ್ಟು ಅಧ್ಯಯನ,** ಪ್ರಸಾರಂಗ ಕನ್ನಡ ವಿ.ವಿ. ಹಂಪಿ ೨೦೦೬.

೨೫. ಯೋಗಿಶ್ವರಪ್ಪ ಡಿ.ಎನ್. **ಹಾಗಲವಾಡಿ ನಾಯಕರು,** ಪ್ರಸಾರಂಗ ಕನ್ನಡ ವಿ.ವಿ. ಹಂಪಿ–೧೯೯೯.

೨೬. ವಾಲಿ ಎಂ.ಎಸ್. **ಡಾ. ಸಿ.ಪಿ. ಲಿಂಗಣ್ಣ ಜೀವನಸಾಧನೆ,** ಕರ್ನಾಟಕ ಜನಪದ ಮತ್ತು ಯಕ್ಷಗಾನ – ೧೯೯೪.

೨೭. ಶಿವರುದ್ರಪ್ಪ ಜಿ.ಎಸ್. **ಕಾವ್ಯಾರ್ಥ ಚಿಂತನ,** ಪ್ರಿಯದರ್ಶಿನಿ ಪ್ರಕಾಶನ ಬೆಂಗಳೂರು – ೧೯೯೮.

೨೮. ಸಿದ್ದಲಿಂಗಯ್ಯಾ **ಗ್ರಾಮದೇವತೆಗಳು,** ಮೂಲಭಾರತಿ ಪ್ರಕಾಶನ ಬೆಂಗಳೂರು – ೧೯೯೭.

೨೯. ಸವದತ್ತಿ ಮಠ ಸಂಗಮೇಶ **ಕನ್ನಡ ಸಾಹಿತ್ಯದ ಸಂಶೋಧನೆ ಮಾರ್ಗ ಮತ್ತು ಇತಿಹಾಸ,** ರೂಪಶ್ರೀ ಪ್ರಕಾಶನ ಧಾರವಾಡ. ೨೦೦೮.

೩೦. ಸಣ್ಣಕ್ಕಿ ನಿಂಗಣ್ಣ – **ಜಾನಪದ ತರಂಗಗಳು,** ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು – ೨೦೦೨.

೩೧. ಸಣ್ಣಕ್ಕಿ ನಿಂಗಣ್ಣ **ಕರ್ನಾಟಕದ ಗೊಂದಲಿಗರು ಹಾಗೂ ಅವರ ಸಾಹಿತ್ಯ,** ಕನ್ನಡ ಸಾಹಿತ್ಯ ಪರಿಷತ್ತ ಬೆಂಗಳೂರು ೨೦೦೩

೩೨. ಸಣ್ಣಕ್ಕಿ ನಿಂಗಣ್ಣ **ಎತ್ತರದ ವ್ಯಕ್ತಿಗಳು,** ವಿಜೇತ್ ಪ್ರಕಾಶನ ಗದಗ ೨೦೦೪.

೩೩ ಸಬರದ ಬಸವರಾಜ – **ಬಂಡಾಯ ಜಾನಪದ,** ಪ್ರಸಾರಂಗ ಕನ್ನಡ ವಿ.ವಿ. ಹಂಪಿ ೨೦೦೬.

೩೪. ಸಬರದ ಬಸವರಾಜ – **ಸಾಹಿತ್ಯ ವಿಮರ್ಶೆ,** ಪಲ್ಲವಿ ಪ್ರಕಾಶನ ಗುಲ್ಬರ್ಗಾ ೨೦೦೫.

೩೫. ಸ್ವಾಮಿ ಬಿ.ಎಸ್. – **ಜಾನಪದ ಸೌರಭ,** ಗೋರಕ್ಷನಾಥ ಪ್ರಕಾಶನ ಬೆಂಗಳೂರು – ೧೯೯೩.

೩೬. ಹುಳಿಯಾರ ನಾಗರಾಜ – **ಆಫ್ರಿಕನ್ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕ ಪರಂಪರೆ,** – ಪ್ರಸಾರಂಗ ಕನ್ನಡ ವಿ. ವಿ. ಹಂಪಿ. ೨೦೦೪.

೩೭. ಹಿರೇಮಠ ಆರ್.ಸಿ. **ಜಾನಪದ ಸಾಹಿತ್ಯ ದರ್ಶನ,** ಕನ್ನಡ ಅಧ್ಯಯನ ಸಾಹಿತ್ಯ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ೧೯೭೪.

೩೮. ಹಲಸಂಗಿ ಗೆಳೆಯರು **ಗರತಿಯ ಹಾಡು,** ಸಮಾಜ ಪುಸ್ತಕಾಲಯ ಧಾರವಾಡ – ೧೯೯೦.

